# ದೇವರ ದಾಸಿಮಯ್ಯನ ವಚನಗಳು : ಒಂದು ಮರುಚಿಂತನೆ

ಕನ್ನಡ ವಿಶ್ವ ವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

೨೦೦೭ - ೨೦೦೮


ಮಾರ್ಗದರ್ಶಕರು

**ಡಾ॥ ವಿ.ಚಂದ್ರಶೇಖರ ನಂಗಲಿ,**

ಕನ್ನಡ ಪ್ರಾಧ್ಯಾಪಕರು,

ಸರ್ಕಾರಿ ಬಾಲಕರ ಕಾಲೇಜು

ಕೋಲಾರ - 563101.

ಸಂಶೋಧನಾ ವಿದ್ಯಾರ್ಥಿ

**ರಾಜ . ಬಿ.ಎಂ**








**ಕಾವ್ಯ ಮಂಡಲ**

(ಹಂಪಿ ಕನ್ನಡ ವಿಶ್ವ ವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)

ನಂ. 13 / 85, ರಾಷ್ಟ್ರೀಯ ವಿದ್ಯಾಲಯ ರಸ್ತೆ,

ಬಸವನಗುಡಿ - ಬೆಂಗಳೂರು - 560004

343

## ದೃಢೀಕರಣ ಪತ್ರ

★★★

ಬೇಡರ ದಾಸಿಮಯ್ಯನ ವಚನಗಳು- ಒಂದು ಮರು ಚಿಂತನೆ ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ಸ್ವತಂತ್ರ ಅಧ್ಯಯನದ ಮೂಲಕ ಡಾ॥ ಎ. ಚಂದ್ರಶೇಖರ ನಂಗಲಿ ಇವರ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧಕ

(ರಾಜ .ಬಿ.ಎಂ)

ದಿನಾಂಕ: 21.11.2008

ಸ್ಥಳ : ಬೆಂಗಳೂರು.

# ದೇವರ ದಾಸಿಮಯ್ಯನ ವಚನಗಳು - ಒಂದು ಮರು ಚಿಂತನೆ

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಕನ್ನಡ ಸಾಹಿತ್ಯದ ಮುಖ್ಯ ಪ್ರಕಾರಗಳಲ್ಲಿ ವಚನವೂ ಒಂದು. ಪದ್ಯವೂ ಅಲ್ಲದ, ಗದ್ಯವೂ ಅಲ್ಲದ ವಿಶಿಷ್ಟ ಛಂದೋ ಪ್ರಕಾರವಿದು.

ರಾಜಾಶ್ರಯದ ಹಂಗಿನಲ್ಲಿದ್ದ, ಜನಸಾಮಾನ್ಯರಿಂದ ದೂರವಾಗಿದ್ದು, ಪಂಡಿತರ ಮೆಚ್ಚುಗೆಯನ್ನೇ ಪ್ರಧಾನ ಉದ್ದೇಶವನ್ನಾಗಿಸಿಕೊಂಡಿದ್ದ ಸಾಹಿತ್ಯವನ್ನು ಮೊಟ್ಟ ಮೊದಲ ಬಾರಿಗೆ ಜನ ಸಾಮಾನ್ಯರ ಬಳಿಗೆ ತಂದ ಕೀರ್ತಿ ವಚನ ಸಾಹಿತ್ಯಕ್ಕೆ ಸಲ್ಲುತ್ತದೆ. ವಚನ ಸಾಹಿತ್ಯವನ್ನು ಅಭ್ಯಾಸ ಮಾಡುವ ಮೊದಲು ಇದರ ಮೊದಲ ಬೇಸಾಯದ ಬಗ್ಗೆ ತಿಳಿಯುವುದು ಸೂಕ್ತ.

ವಚನ ಸಾಹಿತ್ಯವನ್ನು ಲಯಬದ್ಧವಾಗಿ, ಸುಶ್ರಾವ್ಯವಾಗಿ ಗಾಯನ ಸಂಸ್ಕೃತಿಯಲ್ಲಿ ಹಾಡುವ ಪರಂಪರೆ ತಮ್ಮಲ್ಲಿ ಬೆಳೆದುದಕ್ಕೆ ಭವ್ಯ ಇತಿಹಾಸ ಪರಂಪರೆಯೇ ಇದೆ.

ಹಾಗೆಯೇ ವಚನ ಸಾಹಿತ್ಯ ನಿರ್ಮಾಣವಾಗಲು , ಜನ ಮಾನಸದಲ್ಲಿ ಉಳಿಯಲು ಕಾರಣಕರ್ತನಾದ ಪ್ರಮುಖ ವ್ಯಕ್ತಿ ದೇವರ ದಾಸಿಮಯ್ಯ.

ಇಂತಹ ವಚನ ಸಾಹಿತ್ಯಕ್ಕೆ ಭದ್ರ ಅಡಿಪಾಯ ಹಾಕಿ ಅದರ ಮೇಲೆ ಅಲ್ಲಮ ಪ್ರಭು, ಬಸವಣ್ಣ, ಅಕ್ಕ ಮಹಾದೇವಿ, ಸಿದ್ದರಾಮ, ಅಂಬಿಗರ ಚೌಡಯ್ಯ, ಚೆನ್ನ ಬಸವಣ್ಣ - ಮತ್ತಿತರ ಶಿವಶರಣರು ತಮ್ಮ ಅನುಭವ ಸ್ವರೂಪಿಯಾದ ವಚನಗಳನ್ನು ನುಡಿಯಲು ಕಾರಣಕರ್ತನಾದ ಪ್ರಮುಖ ವ್ಯಕ್ತಿ ಎಂದರೆ ದೇವರ ದಾಸಿಮಯ್ಯ.

ಇಂತಹ ದೇವರ ದಾಸಿಮಯ್ಯ ಹೇಗೆ ತನ್ನ ವಚನಗಳಲ್ಲಿ ಕಾವ್ಯಗುಣ, ಜೀವನ ಧರ್ಮ, ಜಾತ್ಯತೀತ ಮನೋಭಾವ, ಮಾನವೀಯತೆ - ಇವುಗಳನ್ನು ತೋರಿಸಿ, ಒಳ್ಳೆಯದನ್ನು ಹೀಗೆ ಸ್ತುತಿಸಿದ್ದಾನೋ, ಹಾಗೆಯೇ ಡಾಂಭಿಕ ಭಕ್ತಿ, ಅಪ್ರಮಾಣಿಕತೆ, ದರ್ಪ, ದುರಂಹಕಾರ, ನಿರಭಿಮಾನ, ಇತ್ಯಾದಿಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾನೆ.

ಇಂತಹ ಆದ್ಯ ವಚನಕಾರನಾದ ದೇವರ ದಾಸಿಮಯ್ಯನ ವಚನಗಳನ್ನು ಹೊಸದಾಗಿ ವಿವರಿಸಿ, ವಿಶ್ಲೇಷಿಸಿ, ವಿಮರ್ಶಿಸ ಬೇಕಾದುದು ಇಂದು ತುಂಬಾ ಅಗತ್ಯವಾಗಿದೆ. ಅಂತಹ ಒಂದು ಪ್ರಯತ್ನವೇ ಈ ನಿಬಂಧದ ಉದ್ದೇಶ.

# ಅಧ್ಯಾಯ - 1

## ದೇವರ ದಾಸಿಮಯ್ಯ : ಜೇಡರ ದಾಸಿಮಯ್ಯ

### ಕನ್ನಡದ ಸಂಶೋಧಕರಲ್ಲಿರುವ ಭಿನ್ನ ದೃಷ್ಟಿ ಮತ್ತು ಅಭಿನ್ನ ದೃಷ್ಟಿಗಳನ್ನು ಕುರಿತ ಚಿಂತನೆಗಳ ಸಂಗ್ರಹಾತ್ಮಕ ನೆಲೆ ಹಾಗೂ ನಿರ್ಣಯಾತ್ಮಕವಾದ ವಿಶ್ಲೇಷಣೆ.

ದೇವರ ದಾಸಿಮಯ್ಯನೇ ಆದ್ಯ ವಚನಕಾರ ಎಂದು ಕವಿ ಚರಿತ್ರೆಗಾರರು ಹೇಳಿದ್ದರೂ ದಾಸಿಮಯ್ಯನೆ ತನ್ನ ವಚನಗಳಲ್ಲಿ 'ನಿಮ್ಮ ಶರಣರ ಸೂಳ್ನುಡಿ' 'ಮೃಡ ಶರಣರ ನುಡಿಗಡಣ' ಎಂಬ ವಾಕ್ಯಗಳನ್ನು ಹೇಳಿರುವುದನ್ನು ನೋಡಿದರೆ ಈತನಿಗಿಂತಲೂ ಮುಂಚೆ ವಚನಕಾರರು ಇದ್ದಿರಬಹುದು ಎಂಬುದು ಸ್ಪಷ್ಟವಾಗುತ್ತದೆ. ಅವರಲ್ಲಿ ದಾಸಿಮಯ್ಯನಿಗಿಂತ ಹಿರಿಯರಾದ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ ಮತ್ತು ಕೆಂಭಾವಿ ಭೋಗಯ್ಯನವರ ವಚನಗಳು ನಮಗೆ ಸಿಗುತ್ತವೆ.

ಆದರೆ ಸುಮಾರು 150 ಸಂಖ್ಯೆಯಷ್ಟು ಹೆಚ್ಚು ವಚನಗಳು ನಮಗೆ ಸಿಕ್ಕಿರುವುದು ದಾಸಿಮಯ್ಯನವು ಮಾತ್ರ. ಈತನ ವಚನಗಳಲ್ಲಿ ನವೀನತೆ ಇದೆ, ಧಾರ್ಮಿಕ ಶ್ರದ್ಧೆಯಿದೆ. ಭಕ್ತನ - ತುಡಿತ ಮಿಡಿತಗಳಿವೆ. ಸಮಾಜೋದ್ಧಾರದ ಕಳಕಳಿ ಇದೆ.

ಆದ್ದರಿಂದಲೇ ದಾಸಿಮಯ್ಯನನ್ನು ವಚನ ವಾಙ್ಮಯದ ಮೂಲ ಪುರುಷ - ಎಂದು ಧೈ ಧೈರ್ಯವಾಗಿ ಹೇಳಬಹುದು.

## ದಾಸಿಮಯ್ಯನ ಕಾಲ - ವೈಯಕ್ತಿಕ ವಿಚಾರ

* ದಾಸ, ದಾಸಯ್ಯ, ದಾಸಿಮಯ್ಯ, ದಾಸಿದೇವ, ಜೇಡರ ದಾಸಯ್ಯ, ದೇಡರ ದಾಸಯ್ಯ, ದೇವರ ದಾಸಿಮಯ್ಯ, ಮುದನೂರು ದಾಸಯ್ಯ - ಮುಂತಾದ ಹೆಸರುಗಳಿಂದ ದಾಸಿಮಯ್ಯನನ್ನು ಕರೆದಿದ್ದಾರೆ. ನೇಯ್ಗೆ ಈತನ ಕಾಯಕವಾದುದರಿಂದ ಜೇಡರ ದಾಸಯ್ಯ ಎಂಬ ಹೆಸರು ಬಂದಿರಬಹುದು. ಈತನು ದೇವರ ಸೇವಕ ನಾದುದರಿಂದ ದೇವರದಾಸ ಎಂಬ ಅರ್ಥದ ಮೇಲೆ ದೇವರ ದಾಸಿಮಯ್ಯ ಎಂಬ ಹೆಸರು ರೂಢಿಗೆ ಬಂದಿರಬಹುದು.

ಆದರೂ ಈ ಎಲ್ಲಾ ಬಗೆ ಬಗೆಯ ಹೆಸರುಗಳಲ್ಲಿ ಜೇಡರ ದಾಸಿಮಯ್ಯ ಎಂಬ ಹೆಸರೆ ಅತ್ಯಂತ ಪ್ರಾಚೀನ ಹಾಗೂ ನಿರ್ದಿಷ್ಟವಾದುದು ಎಂದು ಕೆ.ಅನಂತರಾಮು ಅವರು ಅಭಿಪ್ರಾಯ ಪಟ್ಟಿದ್ದಾರೆ.

ಜೇಡರಿಗೆ ದೇವಾಂಗದವರು ಎಂದು ಕರೆಯುವುದುಂಟು. ದೇವಾಂಗದವರು ಎಂದರೆ ನೇಯ್ಗೆಯ ಕೆಲಸದವರು ಎಂದರ್ಥ. ಜೇಡರ ದಾಸಿಮಯ್ಯ ಎಂಬ ಹೆಸರು ಹೇಗೊ ಹಾಗೆಯೇ

ದೇವಾಂಗರ ದಾಸಿಮಯ್ಯ ಆಗಿ ಆನಂತರ ಜಾತಿಸೂಚಕವಾಗಿ ಈ ದೇವಾಂಗರ ಎಂಬುದು ಕಾಲ ಕಳೆದಂತೆ ಉಚ್ಚಾರಣೆ ಸೌಲಭ್ಯಕ್ಕಾಗಿ ದೇವರ ಎಂದಾಗಿ ಬಳಿಕ ದೇವರ ದಾಸಿಮಯ್ಯ ಆಗಿರಬಹುದು ಎಂದು ಎಂ.ಆರ್. ಶ್ರೀನಿವಾಸಮೂರ್ತಿಯವರು ಅಭಿಪ್ರಾಯ ಪಟ್ಟಿದ್ದಾರೆ. ಭಾಷಾ ವಿಜ್ಞಾನವನ್ನು ಅಭ್ಯಾಸ ಮಾಡುವಾಗ ಒಂದು ಪದ ಹೇಗೆ ಸ್ವರೂಪದಲ್ಲಿ ವ್ಯತ್ಯಾಸ ಹೊಂದುತ್ತದೆ ಎಂಬುದನ್ನು ನೋಡಿದ್ದೇವೆ. ಗ್ರಾಮವೃದ್ಧ > ಗಾವುಂಡ > ಗಾವುಡ > ಗೌಡ, ಆದಂತೆ ದೇವಾಂಗರ > ದೇವರ, ಆಗಿರುವ ಸಾಧ್ಯತೆ ಇದೆ. ಇನ್ನು ಈತನ ಜನನ ಮರಣಗಳ ಬಗ್ಗೆ ಖಚಿತವಾಗಿ ನಮಗೆ ತಿಳಿದು ಬಂದಿಲ್ಲ. ಪಾಲ್ಕುರಿಕೆ ಸೋಮನಾಥನ ಗ್ರಂಥದಲ್ಲಿ ಚಾಲುಕ್ಯ ಜಯಸಿಂಹನ ರಾಣಿ ಸುಗ್ಗಲೆಯು ದಾಸಿಮಯ್ಯನ ಶಿಷ್ಯಳಾಗಿದ್ದಾಳೆಂದು ತಿಳಿದು ಬರುತ್ತದೆ. ಈ ಚಾಲುಕ್ಯರ ವಂಶದ ಜಯಸಿಂಹನ ಕಾಲ ಕ್ರಿಶ. 1015 - 1042 ಎಂದು ಇತಿಹಾಸದಿಂದ ತಿಳಿದು ಬರುತ್ತದೆ. ಇದನ್ನು ಲಕ್ಷಿಸಿ ಹೇಳುವುದಾದರೆ ದಾಸಿಮಯ್ಯ ಜಯಸಿಂಹನ ಕಾಲದವನು ಎನ್ನಬಹುದು. ಈ ವಿಷಯಗಳಿಗೆ ಸಂಬಂಧಪಟ್ಟ ಶಾಸನಗಳನ್ನು ಡಾ: ಎಸ್. ಶ್ರೀಕಂಠಶಾಸ್ತ್ರಿಯವರು ಅಭ್ಯಾಸ ಮಾಡಿದ್ದಾರೆ.

ಗೋವಿಂದ ಪೈ ಅವರು ದಾಸಿಮಯ್ಯನು ಕ್ರಿ. ಶ. ಸುಮಾರು 980 ರಲ್ಲಿ ಜನಿಸಿ ಕ್ರಿ. ಶ. 1040 ರಲ್ಲಿ ಮೃತನಾಗಿರಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ.

## ಜೀವನ

ದೇವರ ದಾಸಿಮಯ್ಯನು ಕಲ್ಬುರ್ಗಿ ಜಿಲ್ಲೆಯ ಮುದನೂರು ಗ್ರಾಮದಲ್ಲಿ ಕಾಮಯ್ಯ ಮತ್ತು ಶಂಕರೀ ದಂಪತಿಗಳ ಮಗನಾಗಿ ಜನಿಸಿದನು. ಬಾಲ್ಯವನ್ನು ಆ ಗ್ರಾಮದಲ್ಲಿಯೇ ಕಳೆದಿರಬಹುದು. ಆ ಕಾಲದಲ್ಲಿ ಶ್ರೀ ಶೈಲ ವೀರಶೈವ ಧರ್ಮ ಪ್ರಸಾರದ ಪ್ರಮುಖ ಕೇಂದ್ರ ಸ್ಥಾನವಾಗಿ ಪ್ರಸಿದ್ಧಿ ಪಡೆದಿತ್ತು. ಹನ್ನೊಂದನೆಯ ಶತಮಾನದ ಆರಂಭದಲ್ಲಿ ಅಲ್ಲಿ ಚಂದ್ರಗುಂಡ ಶಿವಾಚಾರ್ಯ ಎಂಬುವವರು ವೀರಶೈವ ಧರ್ಮ ಸೇವೆಯಲ್ಲಿ ತೊಡಗಿದ್ದರು. ದಾಸಿಮಯ್ಯನು ಬಾಲ್ಯದಿಂದಲೂ ದೈವಭಕ್ತನಾಗಿದ್ದು ಯೌವನ ಕಾಲಕ್ಕಾಗಲೇ ಶಿವಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕೆಂಬ ಆಸೆ ಅಧಿಕವಾಗಿ ತನ್ನ ಹುಟ್ಟೂರಾದ ಮುದನೂರನ್ನು ಬಿಟ್ಟು ಶ್ರೀ ಶೈಲಕ್ಕೆ ಬಂದಿರಬಹುದು . ಅಲ್ಲಿನ ಪ್ರಕೃತಿ ಸೌಂಧರ್ಯವನ್ನು ಕಂಡು ಮನಸಾರೆ ಸವಿದು ಪರಮಾತ್ಮನ ಧ್ಯಾನದಲ್ಲಿ ತಲ್ಲಿನನಾಗಿರಬಹುದು. ದಾಸಿಮಯ್ಯನ ಶಾಂತ ಸ್ವರೂಪಿ ನಡತೆಯನ್ನು ಗಮನಿಸಿದ ಹಿರಿಯ, ಅಪರಿಚಿತ ವ್ಯಕ್ತಿಯೊಬ್ಬ ದಾಸಿಮಯ್ಯನನ್ನು ಚಂದ್ರಗುಂಡ ಶಿವಾಚಾರ್ಯರ ಸೇವೆಯಲ್ಲಿ ತೊಡಗಿ, ನೇಯುವ ಕಾಯಕವನ್ನು ಕೈಗೊಂಡು ಜ್ಞಾನಪಥದಲ್ಲಿ ಮುಂದುವರಿಯಬೇಕೆಂದು ಮಾರ್ಗದರ್ಶನ ನೀಡಿರಬಹುದು. ತನಗೆ ಮಾರ್ಗದರ್ಶನ ನೀಡಿದ ಆ ವ್ಯಕ್ತಿ ದೇವರಂತೆ ಒಂದು ಸಲಹೆ ನೀಡಿದ್ದರಿಂದ ಕೃತಜ್ಞತೆಯಿಂದ ಅವನನ್ನೆ ಈಶ್ವರ ಎಂದಿರಬಹುದು. ದಾಸಿಮಯ್ಯನು ಚಂದ್ರಗುಂಡ ಶಿವಾಚಾರ್ಯರ ಹಾದಿಯಲ್ಲಿ ನಡೆದು ಶ್ರೇಷ್ಟ ಭಕ್ತನಾಗಿ, ಅನುಭಾವಿಯಾಗಿ, ಶಿವಜ್ಞಾನಿಯಾಗಿರಬಹುದು. ಗುರುಗಳ ಅಪ್ಪಣೆ ಪಡೆದು ತನ್ನ ಹುಟ್ಟೂರಿಗೆ ಹಿಂದಿರುಗಿದ ದಾಸಿಮಯ್ಯ ತನ್ನೂರಿನ ರಾಮನಾಥನೆ ಇವನ ಇಷ್ಟ ದೇವತೆಯಾಗಿ 'ರಾಮನಾಥಾ' ಎಂಬ ಅಂಕಿತದಿಂದ ವಚನಗಳನ್ನು ರಚಿಸಿರಬಹುದು. ಇವನ

ಮಡದಿ ದುಗ್ಗಳೆಯು ಭಕ್ತಳು, ಜ್ಞಾನಿಯೂ, ಆಗಿದ್ದು ದಾಸಿಮಯ್ಯನ ದಾರಿಗೆ ಪ್ರೇರಕ ಶಕ್ತಿಯಾಗಿ ನಿಂತಿರಬಹುದು. ದಾಸಿಮಯ್ಯನ ವಿಶಿಷ್ಟ ವ್ಯಕ್ತಿತ್ವದಿಂದಾಗಿ ಪೊಟ್ಟಲಕೆರೆ, ಮುದನೂರುಗಳು ಶೈವ ಧರ್ಮ ಪ್ರಸಾರದ ಕೇಂದ್ರಗಳಾಗುತ್ತವೆ.

ಪೊಟ್ಟಲಕೆರೆಯ ರಾಜನಾದ ಚಾಲುಕ್ಯ ಜಯಸಿಂಹನ ರಾಣಿ ಸುಗ್ಗಲೆಯು ದಾಸಿಮಯ್ಯನ ಶಿಷ್ಯಳಾಗಿ ಶಿವಶರಣೆಯಾಗಿ, ಶೈವ ಧರ್ಮ ಪ್ರಚಾರ ಕಾರ್ಯದಲ್ಲಿ ಗುರುವಿಗೆ ತುಂಬಾ ನೆರವು ನೀಡುತ್ತಾಳೆ. ದಾಸಿಮಯ್ಯನು ವಾದ ಮಾಡುವುದರಲ್ಲಿ ಗಟ್ಟಿಗನಾಗಿದ್ದು ತನ್ನ ಧರ್ಮವನ್ನು ಲೇವಡಿ ಮಾಡಿದ ಜೈನರನ್ನು, ಬ್ರಾಹ್ಮಣರನ್ನು ಸೋಲಿಸಿದ್ದರಿಂದ ದಾಸಿಮಯ್ಯನ ವ್ಯಕ್ತಿತ್ವಕ್ಕೆ ಮಾರುಹೋಗಿ ಅನೇಕರು ದಾಸಿಮಯ್ಯನ ಚಿಂತನೆಯ ಪ್ರಭಾವಕ್ಕೆ ಒಳಗಾಗಿರಬಹುದು.

ಚಾಲುಕ್ಯ ಜಯಸಿಂಹನು ರಾಜನಾಗಿದ್ದ ಪೊಟ್ಟಲಕೆರೆ ಇಂದಿನ ಆಂಧ್ರ ಪ್ರದೇಶದಲ್ಲಿದೆ. ಪೊಟ್ಲಚೇರು ಅಥವಾ ಪೇಟಂಚೇರು ಎಂಬ ಹೆಸರಿನಿಂದ ಹೈದರಬಾದಿಗೆ ಇಪ್ಪತ್ತು ಮೈಲಿ ದೂರದಲ್ಲಿದೆ. ಅಲ್ಲಿ ದಾಸಿಮಯ್ಯನು ಸ್ಥಾಪಿಸಿದನೆಂದು ಹೇಳಲಾದ ಶಿವಾಲಯವಿದ್ದು, ಅದಕ್ಕೆ ನಾಗೇಶ್ವರಲಿಂಗ ಎಂಬ ಹೆಸರಿದೆ. ದಾಸಿಮಯ್ಯನನೂಜಯಸಿಂಹನ ರಾಣಿ ಸುಗ್ಗಲೆಯನ್ನೂ ಕುರಿತಂತೆ ಅವರು ಐತಿಹಾಸಿಕ ವ್ಯಕ್ತಿಗಳೆಂಬುದಕ್ಕೆ ಕೆಲವು ಶಾಸನಗಳಿವೆ.

ದಾಸಿಮಯ್ಯನ ಹುಟ್ಟೂರಾದ ಮುದನೂರಿನಲ್ಲಿ ಅನೇಕ ಪುರಾತನ ದೇವಾಲಯಗಳ ಅವಶೇಷಗಳಿವೆ. ಅಲ್ಲಿರುವ ದೇವಾಲಯಗಳಲ್ಲಿ ರಾಮನಾಥನದೇ ಮುಖ್ಯವಾದುದು. ಅಲ್ಲಿನ ಕೆಲವು ಶಿಲಾಶಾಸನಗಳಲ್ಲಿ 'ದಕ್ಷಿಣ ವಾರಣಾಸಿ' ಎಂಬ ಹೊಗಳಿಕೆಗೆ ಮುದನೂರು ಪಾತ್ರವಾಗಿದೆ.

## ವೀರಶೈವ ವಾಙ್ಮಯದಲ್ಲಿ ದಾಸಿಮಯ್ಯ :

ಸಂಶೋಧಕರು ಮತ್ತು ಕವಿ ಚರಿತ್ರೆಗಾರರಾದ ಶ್ರೀ. ಡಿ.ಎಲ್. ನರಸಿಂಹಚಾರ್ ಅವರು ದೇವಾಂಗ ದಾಸಿಮಯ್ಯನ ಪುರಾಣವನ್ನು ವಿಮರ್ಶಿಸುತ್ತಾ ಕೊನೆಯಲ್ಲಿ "[1] ದೇವರ ದಾಸಿಮಯ್ಯನ ಕಥೆಗಳನ್ನು ತಿಳಿಸುವ ಎಲ್ಲ ಪುರಾಣಗಳನ್ನು ಹೋಲಿಸಿ ನೋಡಿ ಯಾವ ಯಾವುದು ಹೇಗೆ ಹೇಗೆ ಪ್ರವೃದ್ಧವಾಗಿ ಹಬ್ಬಿದೆ ಎಂಬುದನ್ನು ಕಂಡು ಹಿಡಿಯುವ ಕೆಲಸ ಮುಂದಕ್ಕೆ ನಡೆಯಬೇಕಾದ್ದು ಅವಶ್ಯಕ !" ಎಂದು ಹೇಳಿರುವ ಮಾತನ್ನು ಎತ್ತಿಕೊಂಡು ಡಾ. ಎಲ್. ಬಸವರಾಜು ಅವರು ತಮ್ಮ 'ದೇವರ ದಾಸಿಮಯ್ಯನ ವಚನಗಳು' ಎಂಬ ಗ್ರಂಥದ ಪೀಠಿಕೆಯಲ್ಲಿ ಆ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಿದ್ದಾರೆ.

## ಮೊದಲನೆಯ ಘಟ್ಟ :-

ಭಕ್ತಿ ಭಂಡಾರಿ ಎಂದೇ ಹೆಸರಾದ ಬಸವಣ್ಣನವರು ತಮ್ಮ ವಚನಗಳಲ್ಲಿ ದಾಸಿಮಯ್ಯನನ್ನು ಹೃದಯ ತುಂಬಿ ಶ್ಲಾಘಿಸಿದ್ದಾರೆ. ಶಿವನು ಜಂಗಮ ವೇಷದಲ್ಲಿ ಬಂದು ದಾಸಿಮಯ್ಯನಿಂದ

ವಸ್ತ್ರವನ್ನು ಬೇಡಿ ಪಡೆದ ನೆಂಬುದನ್ನು
ಬಾಣ - ಮಮೂರನಂತೆ ಬಣ್ಣಿಸಬಲ್ಲೆನೇ ?
ಸಿರಿಯಾಳನಂತೆ ಉಣಲಿಕ್ಕ ಬಲ್ಲನೇ ?
ದಾಸಿಮಯ್ಯನಂತೆ ಉಡಕೊಡ ಬಲ್ಲೆನೆ ?
ಉಂಡುಟ್ಟು ಕೊಟ್ಟರೆ ಮುಯ್ಯಿಗೆ ಮುಯ್ಯೆನಿಸಿತ್ತು
ಎನಗೆ ಕೊಟ್ಟರೆ ಧರ್ಮ ಕೂಡಲಸಂಗಮದೇವ
ಎಂಬ ವಚನದಲ್ಲಿ ಕಾಣಬಹುದು.

ಇದರ ಮುಂದಿನ ಭಾಗವನ್ನು ಸಹ ಬಸವಣ್ಣನವರೆ ಮತ್ತೊಂದು ವಚನದಲ್ಲಿ ಹೇಳಿದ್ದು. ಅದು ಹೀಗಿದೆ.

ಈತನು ಭಕ್ತನಾಗಿ ಬಂದು ದಾಸನ ವಸ್ತ್ರವ ಬೇಡಿದ, ಕೊಟ್ಟ ದಾಸ ತವನಿಧಿಯ ಪಡೆದ ಎಂಬ ವಚನವು ದಾಸಿಮಯ್ಯನಿಂದ ವಸ್ತ್ರ ಪಡೆದು ತೃಪ್ತನಾದ ಶಿವನು ಪ್ರತಿಯಾಗಿ ಅಕ್ಷಯ ಪಾತ್ರೆಯನ್ನು ನೀಡಿದನೆಂದು ಪ್ರತೀತಿ ಇದೆ. ತವನಿಧಿ ಎಂಬುದು ಪಾತ್ರೆಯಂಥ ಪದಾರ್ಥವಲ್ಲ! ಇದೊಂದು ರೂಪಕ, ದಾಸಿಮಯ್ಯನು ಕೇಳುತ್ತಾ ಬಂದ ಶರಣರ ಸೂಳ್ನುಡಿ ಅಥವಾ ಮೃಢಭಕ್ತರ ನುಡಿಗಡಣವೇ ತವನಿಧಿ ಎನ್ನಬಹುದು. ಅಲ್ಲದೆ ಆದ್ಯ ವಚನ ಕಾರ ನೆಂಬ ಹೆಸರು ಪಡೆಯಲು ಕಾರಣವಾದ ಆತನ ವಚನಗಳು ಕೂಡ ನಮಗಿಂದು ತವನಿಧಿ ಯೇ ಆಗಿದೆ. ( ತವನಿಧಿಯೊಂದು ರೂಪಕ ವಿಚಾರವೆಂಬುದನ್ನು ಚರ್ಚೆಯಲ್ಲಿ ನನಗೆ ತಿಳಿಸಿದವರು ಡಾ|| ವಿ. ಚಂದ್ರ ಶೇಖರ ನಂಗಲಿ ಯವರು) ಆದ್ದರಿಂದಲೇ ಶಿವನಿಂದ ತವನಿಧಿಯಂಥ ನುಡಿ ಮಾಲಿಕೆಯನ್ನು ಪಡೆದ ದಾಸಿಮಯ್ಯನ ವಚನಗಳಲಿ ಅಪೂರ್ವತೇಜದ ಮಾಂತ್ರಿಕ ಶಕ್ತಿಯಿದೆ. ಜಗಜ್ಯೋತಿ ಬಸವಣ್ಣನು ಎಂತಹ ಶಿವಭಕ್ತ ನೆಂಬುದು ಅಕ್ಷರ ಬಲ್ಲವರೆಲ್ಲರಿಗೂ ತಿಳಿದ ವಿಚಾರ. ಆದರೂ ತಮ್ಮಲ್ಲಿ ಭಕ್ತಿ ಯೆಂಬ ವಸ್ತುವಿನ ಕೊರತೆಯಿದೆ ಎಂದು ವಿನಯವನ್ನು ಆತ್ಮ ನಿವೇದನೆ ಮಾಡಿಕೊಂಡು ತಮ್ಮ ವಿನಯ ಹಾಗೂ ಮುಕ್ತ ಮನಸ್ಸನ್ನು ತೆರೆದಿಟ್ಟಿದ್ದಾನೆ. ಕೊನೆಗೆ ಆ ಕೊರತೆಯನ್ನು ನಿವಾರಿಸಿಕೊಳ್ಳಲು ದಾಸಿಮಯ್ಯ ಮೊದಲಾದ ಭಕ್ತರಲ್ಲಿ ಭಿಕ್ಷೆ ಬೇಡಿದ್ದಾನೆ.

ಭಕ್ತಿ ಇಲ್ಲದ ಬಡವ ನಾನಯ್ಯ,
ಕಕ್ಕಯ್ಯನ ಮನೆಯಲು ಬೇಡಿದೆ
ಚೆನ್ನಯ್ಯನ ಮನೆಯಲು ಬೇಡಿದೆ
ದಾಸಯ್ಯನ ಮನೆಯಲು ಬೇಡಿದೆ
ಎಲ್ಲಾ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ
ಎನ್ನ ಪಾತ್ರೆ ತುಂಬಿತ್ತು ಕೂಡಲ ಸಂಬಮದೇವ.

ಎನ್ನುತ್ತಾ ಉತ್ತಮ ಜಾತಿಯಲ್ಲಿ ಹುಟ್ಟಿದ್ದರೂ ಅದನ್ನು ಕುರಿತಂತೆ ಬಸವಣ್ಣನಿಗೆ ಗರ್ವವಿರಲಿಲ್ಲ. ಬದಲಾಗಿ ಅದು 'ಹೊರೆ' ಎಂದೇ ಭಾವಿಸಿದ್ದನು. ತಾನು ಮೇಲ್ಜಾತಿಯವನಾದ ಕಾರಣದಿಂದ ಎಲ್ಲಿ ಕೀಳು ಕುಲದ ಪುರಾತನರ ಕೃಪೆಯಿಂದ ವಂಚಿತನಾಗಿ ಬಿಡುವೆನೊ ಎಂಬ ಕಳವಳ ಬಸವಣ್ಣನಿಗೆ ಇದ್ದಿರಬಹುದು. ನೇಯ್ಗೆಯ ಕಾಯಕದವನಾದ, ಆದ್ಯ ವಚನಕಾರನಾದ ದಾಸಿಮಯ್ಯನ ಬಗ್ಗೆ 'ಆದ್ಯರ ವಚನವಿರಲು ಬೇರೆ ಭಾವಿಯ ತೋಡಿ ಉಪ್ಪು ನೀರ ಸವಿದಂತಾಯಿತಯ್ಯ ಎನ್ನ ಯುಕ್ತಿ' ಎಂಬ ಮಾತು, 'ದಾಸ ಶಿವದಾನವನೆರೆಯ ನೋಡಯ್ಯ' 'ತನು ಮನ - ಧನದಲ್ಲಿ ವಂಚನೆಯನರಿಯರಯ ದಾಸ- ಸಿರಿಯಾಳನವರು' ಎಂಬ ಉಕ್ತಿಯಿಂದ ಬಸವಣ್ಣನವರು ದಾಸಿಮಯ್ಯನನ್ನು ಕೊಂಡಾಡುತ್ತಾ 'ಭಕ್ತಿ ಎಂತಹುದಯ್ಯ! ದಾಸಿಮಯ್ಯ ಮಾಡಿದಂತಹುದಯ್ಯ' ಎಂದು ಉದ್ಗಾರ ತೆಗೆದು ಕೃತಜ್ಞತೆ ವ್ಯಕ್ತಿ ಪಡಿಸಿದ್ದಾನೆ.

ಬಸವಣ್ಣ ಉಕ್ತಿ, ಭಕ್ತಿ, ಇಷ್ಟಕ್ಕೆ ನಿಲ್ಲದೆ, ದಾಸಿಮಯ್ಯನ ಪತ್ನಿ ದುಗ್ಗಳೆಯನ್ನು ಒಳಗೊಂಡಂತೆ ನೆರೆನೆಂಬೋ ನೆರೆನೆಂಬೋ ದಾಸ ದುಗ್ಗಳೆಯರಂತೆ, ನಂಬಿಯಾದರೆ ತನ್ನ ನೀವ ಕೂಡಲ ಸಂಗಮದೇವ ಎಂದು ಹೇಳುವುದರು ಮೂಲಕ ದಾಸಿಮಯ್ಯ ಅತ್ಯಂತ ಎತ್ತರದ ನಿಲುವಿನ ಭಕ್ತನೆಂದು , ಆತನ ಪತ್ನಿಯೂ ಶ್ರೇಷ್ಟ ಭಕ್ತಳೆಂಬುದನ್ನು ಬಸವಣ್ಣ ಸ್ಮರಿಸಿದ್ದಾನೆ.

ಹಾಗೆಯೇ ಸಿದ್ದರಾಮನೆಂಬ ವಚನಕಾರನು ಕೂಡ ದಾಸಿಮಯ್ಯನನ್ನು ಪ್ರಶಂಶಿಸುತ್ತಾ
ಕುಂಬಾರರೆಲ್ಲರೂ ಗುಂಡಯ್ಯನಾಗಬಲ್ಲರೆ ?
ಮಡಿವಾಳರೆಲ್ಲರೂ ಮಾಚಯ್ಯನಾಗಬಲ್ಲರೆ ?
ನೆಯ್ಯ ಬಲ್ಲವರೆಲ್ಲರೂ ದಾಸಿಮಯ್ಯ ನಾಗ ಬಲ್ಲರೆ ? ಎಂದು ಸ್ತುತಿಸಿದ್ದಾನೆ .

## ಎರಡನೇ ಘಟ್ಟ :-

ರಗಳೆಯ ಕವಿ ಎಂದೇ ಖ್ಯಾತನಾದ ಹರಿಹರನು ಶಂಕರ ದಾಸಿಮಯ್ಯನ ರಗಳೆಯಲ್ಲಿ ದೇವರ ದಾಸಿಮಯ್ಯನಿಗಾದ ಗರ್ವಭಂಗದ ವಿಚಾರ ಬರುತ್ತದೆ. ಕಂದ ಶಿಲೆಯ ಶಂಕರ ದಾಸಿಮಯ್ಯ ತುಂಬಾ ಪ್ರಭಾವ ಶಾಲಿಯಾದ ವ್ಯಕ್ತಿ. ಒಮ್ಮೆ ಶಿವನು ಈತನ ಕನಸಿನಲ್ಲಿ ಕಾಣಿಸಿಕೊಂಡು ಲೋಕ ಸಂಚಾರ ಮಾಡಿ ಸದ್ಭಕ್ತರನ್ನು ಸಂದರ್ಶಿಸಿ ನಿನ್ನ ಪ್ರತಾಪವನ್ನು ತೋರಿ ಬಾ ಎಂದು ಅಪ್ಪಣೆ ಮಾಡಿದನೆಂಬ ಉಲ್ಲೇಖವಿದೆ. ಶಿವನ ಆಜ್ಞೆಯಂತೆ ಶಂಕರ ದಾಸಿಮಯ್ಯನು ತನ್ನ ಸತಿಯಾದ ಶಿವದಾಸಿಯನ್ನು, ಶಿಷ್ಯನಾದ ವಕ್ರಪಾದನನ್ನೂ ಜೊತೆ ಮಾಡಿ ಕೊಂಡು ದೇಶ ಸಂಚಾರ ಮಾಡುತ್ತಾ ದೇವರ ದಾಸಿಮಯ್ಯನು ವಾಸಿಸುತ್ತಿದ್ದ ಮುದನೂರಿಗೆ ಬಂದಾಗ ಶಿವನಿಂದ ತವನಿಧಿಯನ್ನು ಪಡೆದಿದ್ದ ದಾಸಿಮಯ್ಯನಿಗೆ ತನ್ನಂತ ಶ್ರೇಷ್ಠ ಭಕ್ತನಾರು ಎಂಬ ಅಹಂಕಾರ ತುಂಬಿ ಕೊಂಡು ತನ್ನೂರಿನ ರಾಮನಾಥ ದೇವಸ್ಥಾನದ ಬಳಿ ಬೀಡು ಬಿಟ್ಟಿದ್ದ ಶಂಕರ ದಾಸಿಮಯ್ಯನನ್ನು ಕಂಡು ಭಕ್ತಿ-ಭಾವದಿಂದ ನಮಸ್ಕರಿಸಿದರೂ ಅದೇ ವೇಳೆಯಲ್ಲಿ ಶಿವದಾಸಿಯ ಸಲಹೆಯಂತೆ ವಕ್ರ ಪಾದನು ಭಿಕ್ಷೆಗೆ ಹೋಗಲು ಅನುವಾದಾಗ ದೇವರ ಧಾಸಿಮಯ್ಯನು ಅವನನ್ನು ತಡೆದು ಭಿಕ್ಷೆಗೆ ಹೋಗುವುದು ಬೇಡ , ನಾನು ನಿಮಗೆ ಬೇಕಾದಷ್ಟು ಧಾನ್ಯವನ್ನ ಕಳುಹಿಸುತ್ತೇನೆ ಎಂಬ ಸಹಜ ನುಡಿ ಕೇಳಿದ ಶಂಕರ ದಾಸಿಮಯ್ಯನಿಗೆ ಕೋಪ ಬಂದು ಅವನ ಮುಖದಿಂದ ಕಿಡಿಕಾರುವಂತೆ ಕೆಂಪೇರಿ ಉದ್ರೇಕದಿಂದ ಮಾತನಾಡಿ ಇದರಿಂದ ದಾಸಿಮಯ್ಯನು ಉದ್ವೇಗಗೊಂಡು ಮಾತಿಗೆ ಮಾತು ಬೆಳೆದಿರಬಹುದು. ದುಡುಕಿದ ಗಂಡನ ವರ್ತನೆಯ ಬಗ್ಗೆ ಬೇಸರಪಟ್ಟು ದುಗ್ಗಳೆ ಶಂಕರದಾಸಿಮಯ್ಯನಲ್ಲಿ ಕ್ಷಮೆ ಕೇಳುವಂತೆ ಕಳುಹಿಸಿರಬಹುದು. ಶಾಂತ ಚಿತ್ತನಾದ ದಾಸಿಮಯ್ಯನಿಗೆ ಹೆಂಡತಿಯ ಸಲಹೆ ಸೂಕ್ತವೆನಿಸಿ ಉರುಳು ಸೇವೆಯ ಮೂಲಕ ಆತನನ್ನು ದೇವರ ಸಮ ಎಂದು ಮನ್ನಣೆ ನೀಡಿರಬಹುದು. ದೇವರಿಗೆ ಅಥವಾ ದೇವರ ಸಮಾನ ವ್ಯಕ್ತಿಗಳಿಗೆ ನಮಸ್ಕರಿಸುವುದು, ಸುತ್ತು ಹಾಕುವುದು ಇಂದಿಗೂ ಚಾಲ್ತಿಯಲ್ಲಿದೆ. ಕೋಪದ ಅನರ್ಥವನ್ನರಿತ ದಾಸಿಮಯ್ಯ ಮುಂದೆ ನೆಮ್ಮದಿಯ ಬದುಕು ಸಾಗಿಸುತ್ತಾ ವಚನಗಳ ತವನಿಧಿಯಾಗಿಯೇ ಉಳಿದಿರಬಹುದು.

ಹೀಗೆ ಹರಿಹರನು ದೇವರ ದಾಸಿಮಯ್ಯನನ್ನು ತನ್ನ ಲಿಂಗಾರ್ಚನೆಯ ರಗಳೆಯಲ್ಲಿ ಮೆಚ್ಚಿಕೊಂಡಿದ್ದರೂ ಆತನ ಅಹಂಕಾರ ಭಾವವನ್ನು ಚಿತ್ರಿಸಿ, ಆತನ ಪತ್ನಿಯಾದ ದುಗ್ಗಳೆಯ ಸಂಯಮವನ್ನು ಪ್ರಸ್ತಾಪಿಸಿದ್ದಾನೆ.

ಪಾಲ್ಕುರಿಕೆ ಸೋಮನಾಥನು ತನ್ನ ಬಸವ ಪುರಾಣಮು ಕೃತಿಯಲ್ಲಿ ದಾಸಿಮಯ್ಯನ ಪವಾಡಗಳ, ಆತನು ವಾದದಲ್ಲಿ ಜೈನರನ್ನು ಸೋಲಿಸಿದುದುರ , ಮತ್ತು ಪೊಟ್ಟಲಕೆರೆಯ ರಾಯ ಜಯಸಿಂಹ ಮತ್ತವನ ಪತ್ನಿ ಸುಗ್ಗಲಾದೇವಿಯರಲ್ಲಿ ಗುರುದಾಸಿಮಯ್ಯ ಮತ್ತು ಧರ್ಮಾಚರಣೆಯ ವಿಚಾರವಾಗಿ ಭಿನ್ನಾಭಿಪ್ರಾಯ ಉಂಟಾಯಿತೆಂಬ ವಿವರವಿದೆ.
ಜೈನರು ಒಂದು ಘಟದಲ್ಲಿ ಸರ್ಪವನಿಟ್ಟು ಶಿವನನ್ನು ತೋರಿಸಬೇಕೆಂದು ಕೇಳಿದರೆಂದು ಅದನ್ನು ದಾಸಿಮಯ್ಯ ತನ್ನ ಹಸ್ತ ಸ್ಪರ್ಶದಿಂದ ಸ್ಫಟಿಕ ಲಿಂಗವನ್ನಾಗಿ ಮಾಡಿದನೆಂಬ ಪವಾಡದ ಕತೆ ಇದೆ.

ಹಾವನ್ನು ಹಿಡಿಯುವುದು ಒಂದು ಕಲೆ. ಮತ್ತು ಅಷ್ಟೇ ಅಪಾಯಕಾರಿಯಾದ ವೃತ್ತಿ. ಹಾವು ಮುಂಗೋಪಿ. ಆದ್ದರಿಂದಲೇ ಹಾವಾಡಿಗರು ಹಿಡಿಯುವ ಮೊದಲು ಅದನ್ನು ಕೆರಳಿಸಿ ವಿಷ ಕಕ್ಕಿ ಖಾಲಿಯಾಗುವಂತೆ , ಅದು ಬಡಿದು - ಬಡಿದು ಸುಸ್ತಾಗುವಂತೆ ಮತ್ತು ಅದರ ಬಾಯಿ ಮುಖಕ್ಕೆ ನೋವಾಗುವಷ್ಟು ಹೊತ್ತು ಕೆರಳಿಸಿ ಸುಸ್ತು ಮಾಡಿ ಆಮೇಲೆ ಅದರ ಶರೀರದ ಮೇಲೆ ಹಂತ ಹಂತವಾಗಿ ಕೋಲನ್ನಿಟ್ಟು ಕತ್ತುಹಿಡಿದು ನಿರುಪದ್ರವ ಗೊಳಿಸಿ ಪಳಗಿಸುತ್ತಾರೆ.

ಇನ್ನೂ ಕೆಲವರು ಧೈರ್ಯವಾಗಿ ಅದರ ಕತ್ತನ್ನಿಡಿದು ನಿಶ್ಚೇತನ ಗೊಳಿಸುತ್ತಾರೆ. ಬಹುಶ : ಈ ರೀತಿ ದಾಸಿಮಯ್ಯನು ಅದರ ಕುತ್ತಿಗೆ ಹಿಡಿದೆತ್ತಿ ಧೈರ್ಯವಾಗಿ ಪ್ರದರ್ಶಿಸಿರಬಹುದು. ನೋಡಿದ ಜನ ಬೆರಗಾಗಿ ' ಪವಾಡ ಪುರುಷ 'ನೆಂದು ಅಚ್ಚರಿ ವ್ಯಕ್ತಪಡಿಸಿರಬಹುದು. ಮುಗ್ಧ ಜನ ದಾಸಿಮಯ್ಯನ ಸಲಹೆ, ಮಾರ್ಗದರ್ಶನ ಪಡೆದಿರಬಹುದು.

ತ್ರಿಭುವನ ತಾತನ ಈ ರಗಳೆಯಲ್ಲಿ ದಾಸಿಮಯ್ಯನು ದುಬಾರಿ ಬೆಲೆಯ ಯಾರೂ ಕೊಳ್ಳದ ವಸ್ತ್ರವನ್ನು ನೇಯ್ದು ಕೊನೆಗೆ ಜಂಗಮ ಸ್ವರೂಪಿಯಾದ ಶಿವನಿಗೆ ಕೊಟ್ಟು ಅವನಿಂದ ತವನಿಧಿಯನ್ನು ವರವಾಗಿ ಪಡೆದ ಕಥೆ ಇದೆ.

ದಾಸಿಮಯ್ಯ ಮತ್ತು ಆತನ ಪತ್ನಿ ದುಗ್ಗಳೆ ನೇಯ್ಗೆ ಕಾಯಕ ಮಾಡುತ್ತಾ ,ಬಂದ ಹಣದಲ್ಲಿ ತಾವು ಸರಳವಾಗಿ ಬದುಕುತ್ತಾ, ಅಸಹಾಯಕರಿಗೆ ನೆರವು ನೀಡುತ್ತಾ ಜೀವನ ಸಾಗಿಸುತ್ತಿದ್ದಿರಬೇಕು . ಆನಂತರ ಶಿವ ಮತ್ತು ಶಿವಶರಣರ ಮಹಿಮೆ ಸಾರುವ ಸುಂದರ ವಸ್ತ್ರವನ್ನು ನೇಯ್ದನೆಂಬ ವಿವರವಿದೆ. ಒಂದು ವೃತ್ತಿಯಲ್ಲಿ ನಿಷ್ಠೆಯಿಂದ ತನ್ಮಯತೆಯಿಂದ ತೊಡಗಿಸಿಕೊಂಡರೆ ಕಾಲ ಕ್ರಮೇಣ ಆ ವೃತ್ತಿಯಲ್ಲಿ ನೈಪುಣ್ಯತೆ , ಪರಿಪೂರ್ಣತೆ ಯತ್ತ ಸಾಗುವ ಸಹಜತೆ ಇದೆ ಈ ಕತೆಯಲ್ಲಿ.

ದುಬಾರಿ ಬೆಲೆಯ ಪದಾರ್ಥವನ್ನು ಕಂಡು ಮೋಹಿಸಿ, ಬಳಿಕ ಅದರ ದರ ಕೇಳಿ ನಿರುತ್ಸಾಹಗೊಳ್ಳುವ ಸಾಮಾನ್ಯನಂತೆ , ಹಾಗೆಯೇ ಹೆಚ್ಚು ಬೆಲೆ ಬಾಳುವ ಸರಕಿನ ಗುಣಮಟ್ಟ ತಿಳಿಯದೆ ಅದರ ಮೌಲ್ಯ ಕೇಳಿ ಓಡಿ ಹೋಗುವ ಜನರ ವರ್ತನೆ ಕಂಡು ಬೇಸರಗೊಳ್ಳುವ ಮಾಲೀಕನಂತೆ, ಕಡೆಗೆ ಬಂದಷ್ಟಕ್ಕೆ ಮಾರಿ ಕೈತೊಳೆದುಕೊಳ್ಳುವ ಕೃಷಿಕನಂತೆ ನಿಜ ಸ್ಥಿತಿಗೆ ಈ ಘಟನೆ ಕನ್ನಡಿ ಹಿಡಿದಂತಿದೆ! ಕೊಳ್ಳುವ ವ್ಯಕ್ತಿಯಯ ಅದರ ಗುಣಮಟ್ಟ ಪರೀಕ್ಷಿಸುವಷ್ಟೇ ಸಹಜವಾಗಿದೆ ಶಿವ ಪರೀಕ್ಷೆ ಎಂಬ ನೀತಿ.

ವ್ಯಾಪಾರ ವ್ಯವಹಾರದಲ್ಲಿ ಹಣಕ್ಕೆ ಬದಲಾಗಿ ದವಸ ಧಾನ್ಯಗಳನ್ನು ನೀಡುವುದು, ಈ ಧವಸ ಧಾನ್ಯಗಳನ್ನು ಮಡಿಕೆ - ಕುಡಿಕೆ ಗಳಲ್ಲಿ ಸಂರಕ್ಷಿಸುವುದು, ಈ ಸಂರಕ್ಷಣೆಯ ಕಾಲವಾಗಿ ಮನೆಯಲ್ಲ ತವನಿಧಿಯಾಗುವುದು ಎಂಬೀ ಇಡೀ ಪ್ರಸಂಗ ತುಂಬಾ ಧ್ವನಿಪೂರ್ಣವಾಗಿದೆ. ಬಗೆಬಗೆಯ ದವಸ ಧಾನ್ಯಗಳ ಸೃಷ್ಠಿ ಶಕ್ತಿಯನ್ನು ನಾಶಪಡಿಸುತ್ತಿರುವ ಚಿಂತನೆಯ ನಿರ್‌ಬೀಜೀಕರಣದ ವಿರಾಟ್ ಸ್ವರೂಪದ ವಿ.ಚಂದ್ರಶೇಖರ ನಂಗಲಿ ಚಿಂತನೆಯ ಹಿನ್ನಲೆಯಲ್ಲಿ ಇದನ್ನು ಪರಿಶೀಲಿಸಿದರೆ ಧಾನ್ಯ ಸಂರಕ್ಷಣೆಯಿಂದ ಮೆನೆಯಲ್ಲಿ ತವನಿಧಿಯಾಗುವ ಈ ಪವಾಡ ಪ್ರಸಂಗಕ್ಕೆ ಇರುವ ಪ್ರಸ್ತುತತೆ ಸ್ವಯಂ ಸ್ಪಷ್ಟವಾಗಿದೆ.

ತಾನು ನಿರ್ಮಿಸಿದ ಅಪರೂಪದ, ಬೆಲೆಬಾಳುವ ವಸ್ತುವನ್ನು ತಕ್ಕ ಬೆಲೆಗೆ ಕೊಳ್ಳುವ ವ್ಯಕ್ತಿಯ ಬಗ್ಗೆ ಮಾರಿದವನಿಗೆ ಕೃತಜ್ಞತೆ ಇರುತ್ತದೆ. ಅಂತಹ ವ್ಯಕ್ತಿಗಳು ಹಸಿವೆಂದಾಗ, ಚೌಕಾಸಿ ಮಾಡಿದಾಗ ಬೇಕಾದರೆ ಉಂಡು ಹೋಗಿ, ವಿಶ್ವಾಸ. ಇದು ವ್ಯಾಪಾರ ! ಅನ್ನುವವರನ್ನು ಕಂಡಿದ್ದೇವೆ. ಅಂತಹವನಿಗೆ ಕೊಂಡ ವಸ್ತುವಿನ ಬಳಕೆಯ ಅಧಿಕಾರವಿರುವಂತೆ ಕೊಟ್ಟವನಿಗೆ ನಿರ್ಲಿಪ್ತತೆ ಇರಬೇಕಾದುದು ಅಗತ್ಯ. ಅದು ದಾಸಿಮಯ್ಯನಲ್ಲೂ ಇದ್ದಿರಬಹುದು.

ತ್ರಿಭುಜನ ತಾತನು ರಚಿಸಿದನೆಂದು ಹೇಳಲಾದ ಚೇಡರ ದಾಸಿಮಯ್ಯನ ರಗಳೆ ಕೃತಿಯ ಕರ್ತೃತ್ವವನ್ನು ಕುರಿತು ಡಾ|| ಎಲ್. ಬಸವರಾಜುರವರು ಇದರ ಕಥೆಯ ಥಾಟಿ ಮತ್ತು ಕಲ್ಪನೆಯ ಧೋರಣೆ ಹದಿಮೂರನೆ ಶತಮಾನದಷ್ಟು ಹಳೆಯದೆನಿಸುವುದಿಲ್ಲ. ಪಾಠ ಪರಿಷ್ಕಾರವಾಗದ ಹೊರತು ಈ ಬಗ್ಗೆ ಖಚಿತವಾಗಿ ಏನನ್ನು ನಿರ್ಣಯಿಸಲು ಸಾಧ್ಯವಿಲ್ಲ ಎಂದಿದ್ದಾರೆ.

## ಮೂರನೇ ಘಟ್ಟ :

ಈ ಘಟ್ಟದಲ್ಲಿ ಶಾಂತಲಿಂಗನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಎಂಬುದು ಪ್ರಮುಖವಾದುದು. ದಾಸಿಮಯ್ಯನ ಹಿರಿಮೆಯನ್ನು ಕುರಿತಂತೆ ಅನೇಕ ಹೊಸ ವಿಷಯಗಳು ಇಲ್ಲಿ ಸೇರ್ಪಡೆಯಾಗಿವೆ. ದೇವರ ದಾಸಿಮಯ್ಯನ ರಗಳೆಯ ವಸ್ತ್ರದ ಕಥೆ ಇದರಲ್ಲಿಯೂ ಇದ್ದು ಸ್ವಲ್ಪ ವ್ಯತ್ಯಾಸ ಕಂಡು ಬರುತ್ತದೆ. ದಾಸಿಮಯ್ಯನಿಂದ ಜಂಗಮ ಸ್ವರೂಪಿ ಶಿವನು ಪಡೆದುಕೊಂಡು ಹರಿದು ಹಂಚಿ ಚಿಂದಿ ಮಾಡಿದರೂ 'ಅವರಿಚ್ಛಾ ಪದಾರ್ಥವ ತಮ್ಮಿಚ್ಛೆ ಬಂದಂತೆ ಮಾಡಲಿ' ಎಂದು ಸುಮ್ಮನಾಗಿ ಆ ಜೀವಂತ ಲಿಂಗವನ್ನು ತನ್ನ ಮನೆಗೆ ಕರೆ ತಂದು ಸಕಲ ಪದಾರ್ಥ ನೀಡಿ ತೃಪ್ತಿಪಡಿಸಿದನಂತೆ. ಆಗ ಜಂಗಮ ವೇಷಧಾರಿ ಶಿವನು ದಾಸಿಮಯ್ಯನಿಗೆ ತವನಿಧಿಯನ್ನು ಗೋಪ್ಯದಿಂದ ಕೊಟ್ಟು ಹೋದುದರ ಪ್ರಸ್ತಾಪವಿದೆ.

ಇದರಲ್ಲಿ ದಾಸಿಮಯ್ಯನ ಸಾಂಸಾರಿಕ ಜೀವನಕ್ಕೆ ಸಂಬಂಧ ಪಟ್ಟ ಎರಡು ಸ್ವಾರಸ್ಯಕರವಾದ ಎರಡು ಪ್ರಸಂಗಗಳು ಇದರಲ್ಲಿವೆ. ದಾಸಿಮಯ್ಯನಿಗೆ ಗೃಹಸ್ಥ ಧರ್ಮವನ್ನು ಸ್ವೀಕರಿಸಬೇಕೆಂಬ ಇಚ್ಛೆ ಹುಟ್ಟಿದಾಗ ಬುದ್ಧಿವಂತೆಯಾದ ಸತಿಯನ್ನು ಪಡೆಯಬೇಕೆಂದು ನಿರ್ಧರಿಸಿದನಂತೆ. ಅದಕ್ಕಾಗಿ ಒಂದು ಉಪಾಯ ಯೋಚಿಸಿ [2] ಒಂದಿಷ್ಟು ಮಳಲು ಒಂದಿಷ್ಟು ಅಕ್ಕಿ, ಒಂದು ಕಬ್ಬಿನ ಜಲ್ಲೆ, ಇಷ್ಟು ಪದಾರ್ಥಗಳನ್ನು ಕೈಲಿಡಿದು "ಕಟ್ಟಿಗೆಯನ್ನು ಮುಟ್ಟದೆ ಬೆಂಕಿ ಮಾಡಿ, ನೀರನ್ನು ಮುಟ್ಟದೆ ಕಬ್ಬಿನ ಸಹಾಯದಿಂದ ಮಳಲಕ್ಕಿಯ ಪಾಯಸ ಮಾಡಿ ಕೊಟ್ಟರೆ ಅಂತಹ ಸ್ತ್ರೀಯನ್ನು ಮದುವೆಯಾಗುತ್ತೇನೆ [2]" ಎಂದು ಸಾರುತ್ತಾ ದೇಶಾದ್ಯಂತ ಸುತ್ತುತ್ತಾ, ಮನೆ ಮನೆಗಳಲ್ಲಿ ಭಿಕ್ಷೆ ಬೇಡುತ್ತಿರಲು "ಈ ಕೆಲಸ ಯಾರ ಕೈಯಿಂದ ಸಾಧ್ಯ?" ಎಂದು ಜನ ನಕ್ಕು ಬಿಟ್ಟರಂತೆ. ಕೊನೆಗೆ ಮುದನೂರಿಗೆ ಬಂದಾಗ ಅಲ್ಲಿ ನೆಯ್ಗೆಯ ಸಂಕಣ್ಣ ಮತ್ತು ಶ್ರೀದೇವಿಯವರ ಮಗಳು 'ದುಗ್ಗಳಮ್ಮ' ಒಂಭತ್ತು ವರ್ಷದ ಕನ್ಯೆಯಾಗಿದ್ದರೂ ಬಲು ಚತುರೆಯಾಗಿದ್ದು ಮಳಲಕ್ಕಿಯ ಪಾಯಸವನ್ನು ತಾನು ಸಿದ್ದ ಪಡಿಸುವುದಾಗಿ ಒಪ್ಪಿಕೊಂಡು ದಾಸಿಮಯ್ಯನ ಅನುಮತಿ ಪಡೆದು ಇನ್ನಷ್ಟು ಕಬ್ಬಿನ ಜಲ್ಲೆಗಳನ್ನು ಪಡೆದು, ಗಾಣದಲ್ಲಿ ಅರೆಸಿ ತಂದ ಸಿಪ್ಪೆಯನ್ನು ಬಿಸಿಲಿನಲ್ಲಿ ಒಣಗಿಸಿಕೊಂಡು ಕಬ್ಬಿನ ಬುಡದ ಹಾಲನ್ನು ಒಂದು ಪಾತ್ರೆಗೂ, ತುದಿಯ ಹಾಲನ್ನು ಮತ್ತೊಂದು ಪಾತ್ರೆಗೂ ಸಂಗ್ರಹಿಸಿಟ್ಟು ತುದಿಯ ಹಾಲನ್ನು ಒಲೆಯ ಮೇಲಿಟ್ಟು ಕಬ್ಬಿನ ಸಿಪ್ಪೆಯಿಂದ ಬೆಂಕಿ ಮಾಡಿ ಮರಳನ್ನು ಅಕ್ಕಿಯನ್ನು ಬೆರೆಸಿ ಕಬ್ಬಿನ ಹಾಲಿಗೆ ಹಾಕಿ ಕುದಿಸಿದಳಂತೆ. ಅಕ್ಕಿ ಪಾಕವಾದಾಗ, ಬುಡದ ಹಾಲನ್ನು ಮೇಲಿಂದ ಸುರಿದು ಮರಳು ಮಡಿಕೆಯಲ್ಲಿ ಕೆಳಗಿಳಿಯುವಂತೆ ಮಾಡಿ, ಅನಂತರ ಮೇಲಿನ ಪಾಯಸವನ್ನು ಬೇರೊಂದು ಮಡಕೆಗೆ ಸಂಗ್ರಹಿಸಿ ದಾಸಿಮಯ್ಯನಿಗೆ ನೀಡಿದಳಂತೆ. ಪಾಯಸ ಸವಿದ ದಾಸಿಮಯ್ಯ ಮೆಚ್ಚಿ ದುಗ್ಗಳದೇವಿಯನ್ನು ಮದುವೆಯಾದನಂತೆ.

ಒಮ್ಮೆ ಇಬ್ಬರು ಚರಮೂರ್ತಿಗಳಲ್ಲಿ ಸಂಸಾರ ಲೇಸೆ? ವಿರಕ್ತಿ ಲೇಸೆ? ಎಂಬ ವಿಚಾರದಲ್ಲಿ ವಾಗ್ವಾದ ನಡೆದು ಇಬ್ಬರು ದೇವರ ದಾಸಿಮಯ್ಯನ ಬಳಿಗೆ ಬಂದಾಗ ಮಧ್ಯಾಹ್ನದ ಸಮಯ. ಬಹುಶ: ನೇಯುತ್ತಾ ಕುಳಿತಿದ್ದ ದಾಸಯ್ಯ ದುಗ್ಗಳೆಯನ್ನು ಕರೆದು ದೀಪವನ್ನು ತರಿಸಿ ಎಳೆಯನ್ನು

ಗಂಟಿಕ್ಕಿ ಮತ್ತು ಕರೆದು ತಲೆಯ ಮೇಲೆ ಇರುವ ಕುಂಚಿಕೆಯನ್ನು ಅವಳಿಂದ ಕೇಳಿ ಪಡೆದು ಊಟಕ್ಕೆ ಕುಳಿತಾಗ ಪುನ: ದುಗ್ಗಳೆಯನ್ನು ಕರೆದು ಮೊನ್ನೆ ಅಟ್ಟ ಅಂಬಲಿ ಕೈಯನ್ನು ಸುಡುತ್ತಿದೆ , ಆರಿಸಿಕೊಡು ಎಂದಾಗ ಆಗ ಆ ಜಂಗಮರು ಆಶ್ಚರ್ಯ ಚಕಿತರಾಗಲು ದಾಸಿಮಯ್ಯನು " ಇಂತಹ ಹೆಣ್ಣಾದರೆ ಸಂಸಾರ ಲೇಸು " ಎಂದನಂತೆ. ಈ ವಿವರಗಳಿಂದ ದುಗ್ಗಳೆ ದಾಸಿಮಯ್ಯನಿಗೆ ತಕ್ಕ ಹೆಂಡತಿಯಾಗಿದ್ದಳು ಎಂಬುದು ಸ್ಪಷ್ಟವಾಗುತ್ತದೆ. ದುಗ್ಗಳೆಯು ತಾನೂ ಒಬ್ಬ ವಚನಕಾರ್ತಿಯಾಗಿದ್ದು, ಇಷ್ಟಲಿಂಗವನ್ನು ' ದಾಸಯ್ಯ ಪ್ರಿಯ ರಾಮನಾಥ' ಎಂದು ಹೇಳಿರುವುದನ್ನು ನೋಡಿದರೆ ಆ ಮೂಲಕ ತನ್ನ ಪತಿಯನ್ನು, ಇಷ್ಟದೈವವನ್ನು ಏಕಕಾಲಕ್ಕೆ ಸ್ಮರಿಸಿದ್ದಾಳೆ.

ಒಂದಿಷ್ಟು ಮಳಲು, ಕಬ್ಬು, ಅಕ್ಕಿಯಿಂದ ಸವಿಯಾದ ಪಾಯಸ ಮಾಡಿಕೊಟ್ಟು ಮೆಚ್ಚಿಸಿ ದಾಸಿಮಯ್ಯನ ಕೈಹಿಡಿದ ಪ್ರಸಂಗ ಪುರುಷ ಪ್ರಧಾನ ವ್ಯವಸ್ಥೆಯ ಪ್ರತೀಕ. ಈ ಹಿಂದೆ ಹಳ್ಳಿ ಹಳ್ಳಿಗಳ ಬಚ್ಚಲು ಚರಂಡಿಗಳ ಬಳಿ ಕೂತು ನೀರು ಮತ್ತು ಮಣ್ಣನ್ನು ಸೋಸಿ ಅದರಲ್ಲಿ ಬೆಲೆಬಾಳುವ ಚಿನ್ನ ಮತ್ತಿತರ ಲೋಹಗಳನ್ನು ಹುಡುಕುವ ಕಾಯಕ ಮಾಡುವ ಬಡ ಹೆಂಗಸರಿದ್ದರು. ಅವರು ಬಾಣಲೆಯತಳದಲ್ಲಿ ಕೂತ ಮರಳನ್ನು ಶೋಧಿಸಲು ಹೆಚ್ಚು ಹೆಚ್ಚು ನೀರು ಹಾಯಿಸುತ್ತಿದ್ದರು. ಆಗ ಅಂತಹ ವಸ್ತುವೇನಾದರೂ ಇದ್ದರೆ ಮೇಲೆ ತೇಲಿ ಬರುತ್ತಿತ್ತು. ಹಾಗೆಯೇ ತೂಕದ ಪದಾರ್ಥ ತಳದಲ್ಲುಳಿದು, ಹಗುರ ಪದಾರ್ಥ ತೇಲಿ ಬರುವುದು ನೀರಿನ ಸಾಪೇಕ್ಷ ನಿಯಮ, ಗ್ರಾಮೀಣ ಕಸುಬಿನ ಜನಕ್ಕೆ ಇಂತಹದೆಲ್ಲಾ ಗೊತ್ತು, ದುಗ್ಗಳೆಗೆ ಅದರ ಪರಿಚಯವಿದ್ದುದು ಅಚ್ಚರಿಯಲ್ಲ.

ಜೈನರು ದಾಸಿಮಯ್ಯನೊಡನೆ ವಾದಮಾಡಿ ಸೋತು ಅಷ್ಟಕ್ಕೆ ಸುಮ್ಮನಾಗದೆ ತಮ್ಮ ಜಿನನ ಮಹಿಮೆಯನ್ನು, ಅರಳಿಮರವನ್ನು ಮಾತನಾಡಿಸುವುದರ ಮೂಲಕ ತೋರಿಸುತ್ತೇವೆಂದು ಹೇಳಿದರಂತೆ. ಒಬ್ಬ ಹುಡುಗನನ್ನು ಅರಳಿ ಮರದ ಪೊಟರೆಯಲ್ಲಿ ಕೂರಿಸಿ, ತಾವು ಕೂಗಿದಾಗ ಮಾತ್ರ ಮಾತನಾಡಬೇಕೆಂದು ಹೇಳಿ ಸಂಚು ಮಾಡಿ ಕೂರಿಸಿದರಂತೆ. ಆದರೆ ಜೈನರು ಅರಳಿಮರವನ್ನು ಮಾತನಾಡಿಸಬೇಕೆಂದು ಕರೆದಾಗ, ಆ ಹುಡುಗ ಒಳಗೆ ಅಸುನೀಗಿ ಹುಡುಗನ ತಾಯಿ ಕಣ್ಣೀರು ಕರೆಯುತ್ತಾ ದಾಸಿಮಯ್ಯನ ಬಳಿ ಬಂದು ತನ್ನ ಮಗನನ್ನು ಉಳಿಸಿಕೊಡುವಂತೆ ಪ್ರಾರ್ಥಿಸಿದಳೆಂದು ದಾಸಿಮಯ್ಯನು ತನ್ನ ಮಹಿಮೆಯಿಂದ ಹುಡುಗನನ್ನು ಬದುಕಿಸಿ ಕೊಟ್ಟನೆಂದೂ ಜೈನರು ಸೋಲನ್ನೊಪ್ಪಿಕೊಂಡರೆಂಬ ಕತೆ ಇದೆ. ಸರಿಯಾದ ಗಾಳಿ ಬೆಳಕಿಲ್ಲದ ಜಾಗದಲ್ಲಿ ಕೂತದ್ದರಿಂದಲೋ, ಹೆದರಿಕೆಯಿಂದಲೋ ಹುಡುಗ ಪ್ರಜ್ಞೆ ತಪ್ಪಿರಬಹುದು. ದಾಸಿಮಯ್ಯ ಗಾಳಿ ಬೀಸಿ ನೀರು ಚಿಮುಕಿಸಿ ಉಪಚರಿಸಿರಬಹುದು. ಎದುರಾಳಿಗಳು ನಾಚಿಕೆಯಿಂದ ತಲೆ ತಗ್ಗಿಸಿರಬಹುದು.

ಒಮ್ಮೆ ದಾಸಿಮಯ್ಯನ ಶಿಷ್ಯರು ಮದುವೆಯ ಕಾರ್ಯಕ್ಕೆ ಬರಬೇಕೆಂದು ಗುರುವಿಗೆ ಮನವಿ ಸಲ್ಲಿಸುತ್ತಾರೆ. ಕೂಡಲೆ ದಾಸಿಮಯ್ಯನು ತನ್ನ ಶಿವಭಕ್ತರೊಂದಿಗೆ ಹೋಗುತ್ತಿದ್ದಾಗ ದಾರಿಯಲ್ಲಿ ಗೌತಮಿ ಎಂಬ ನದಿ ದಾರಿಗಡ್ಡವಾಗಿ ತುಂಬಿ ಹರಿಯುತ್ತಿರುತ್ತದೆ. ಆದರೆ ದಾಸಿಮಯ್ಯನ ಪ್ರಭಾವದಿಂದ ಅದು ಇಬ್ಭಾಗವಾಗಿ ದಾರಿ ಮಾಡಿಕೊಟ್ಟಿತು ಎಂಬ ಕಥೆ ಇದೆ. ಗೌತಮಿ ನದಿ ದಾಟಿ ಶಿಷ್ಯನ ಮದುವೆಗೆ ಹೋಗಲು ಕಲ್ಲು ಬಂಡೆಗಳಿರುವ, ಕಡಿಮೆ ನೀರಿನ ಪ್ರವಾಹದ ಜಾಗದಲ್ಲಿ ದಾಸಿಮಯ್ಯ ಸಾಗಿರಬಹುದು.

## ಕೊನೆಯ ಘಟ್ಟ :-

ದೇವ ಕವಿಯು ಸಂಸ್ಕೃತದಲ್ಲಿ ಬರೆದ ದೇವಾಂಗ ಪುರಾಣದ ಅನುವಾದವೇ ಅಪ್ಪಯ್ಯ ದೀಕ್ಷಿತನು ಕನ್ನಡದಲ್ಲಿ ಬರೆದ ದೇವಾಂಗ ಪುರಾಣ : ಇದರಲ್ಲಿ ದಾಸಿಮಯ್ಯನ ಆರು ಪೂರ್ವ ಜನ್ಮಗಳ ವೃತ್ತಾಂತವಿದೆ. ಕೈಲಾಸದಲ್ಲಿ ಒಮ್ಮೆ ಶಿವ ಓಲಗ ಕೊಟ್ಟದ್ದಾಗ ನಗ್ನರಾದ ದೇವತೆಗಳು ತಮಗೊಬ್ಬ ವಸ್ತ್ರ ನಿರ್ಮಾತೃವನ್ನು ದಯಪಾಲಿಸಬೇಕೆಂದು ಬೇಡಿದರಂತೆ . ಅದರ ಫಲವಾಗಿ ಶಿವನ ಶರೀರದಿಂದ ದೇವಾಂಗನು ಜನಿಸಿ ವಸ್ತ್ರವನ್ನು ನೇದು ಶಿವನಾದಿಯಾಗಿ ಸಕಲ ಸುರಾಸುರ ಮಾನವರಿಗೂ ಉಡಲು ಕೊಟ್ಟನಂತೆ.

ಎರಡನೆ ಅವತಾರದಲ್ಲಿ ವಿದ್ಯಾಧರನಾಗಿ ಹುಟ್ಟಿ ಕೆಲವು ಶಾಸ್ತ್ರ, ಪುರಾಣ ಗಳನ್ನು ನಿರ್ಮಿಸಿದನಂತೆ.

ಮೂರನೆ ಅವತಾರದಲ್ಲಿ ಪುಷ್ಪದತ್ತನಾಗಿ ಹುಟ್ಟಿ ಪರಿಪರಿಯ ಪುಷ್ಪಗಳನ್ನು ಲೋಕಕ್ಕೆ ನೀಡಿದನಂತೆ.

ನಾಲ್ಕನೆ ಅವತಾರದಲ್ಲಿ ಶಿವನ ಶಾಪದಿಂದ ಭೇತಾಳನಾಗಿ ಹುಟ್ಟಿ ಜಗಕ್ಕೆ ಮಲ್ಲವಿದ್ಯೆಯನ್ನು ಬೋಧಿಸಿ ವಿಕ್ರಮನಿಂದ ಶಾಪ ವಿಮೋಚನೆಯಾಯಿತಂತೆ.

ಐದನೆ ಅವತಾರದಲ್ಲಿ ವರರುಚಿಯಾಗಿ ಹುಟ್ಟಿ ಲೋಕದಲ್ಲಿ ವ್ಯಾಕರಣವನ್ನು ಹರಡಿ ಧಾರಾ ನಗರದ ಭೋಜ ರಾಜನಿಗೆ ಅರುವತ್ತು ನಾಲ್ಕು ವಿದ್ಯೆಗಳನ್ನು ಕಲಿಸಿದನಂತೆ.

ಆರನೆ ಅವತಾರದಲ್ಲಿ ದೇವಸಾಲಿಯಾಗಿ ಜನಿಸಿದಂತೆ.

ಏಳನೆ ಅವತಾರವೇ ಜೇಡರ ದಾಸಿಮಯ್ಯ. ದುಗ್ಗಳೆಯನ್ನು ವಿವಾಹವಾಗಿ ದಾಸೋಹ ನಡೆಸುತ್ತಾ, ಬಟ್ಟೆ ನೇಯುತ್ತಾ, ತವನಿಧಿ ಪಡೆದು ರಾಜ ಬಲ್ಲಾಳನ ಹೆಂಡತಿ ಸುಗ್ಗಲೆಗೆ ಶಿವದೀಕ್ಷೆ ಕೊಟ್ಟು, ಜೈನರನ್ನು, ಭೌದ್ದರನ್ನು ಉಪದೇಶ ಮಾಡಿ ಶಿವಮತಕ್ಕೆ ಸೇರಿಸಿದನಂತೆ. ರಾಮನಾಥನ ಪ್ರಸಾದದಿಂದ ' ರಾಮಯ್ಯ ' ಎಂಬ ಮಗನನ್ನು ಪಡೆದನಂತೆ. ಇಲ್ಲಿಗೆ ಪುರಾಣ ಮುಗಿಯುತ್ತದೆ.

ವಿರೂಪಾಕ್ಷ ದೇಶಿಕನು ಯಾವುದೋ ಸಂಸ್ಕೃತ ಮೂಲದ ಆಧಾರದ ಮೇಲೆ ರಚಿಸಿರುವ ' ದೇವರ ದಾಸಿಮಯ್ಯನ ಪುರಾಣ ' ಎಂಬ ಗ್ರಂಥವು ದಾಸಿಮಯ್ಯನ ಚರಿತ್ರೆಯನ್ನು ವಿಸ್ತಾರವಾಗಿ ನಿರೂಪಿಸುತ್ತದೆ. ನಾರದನು ಶಿವನಿಗೆ, ಭೂಲೋಕದಲ್ಲಿ ಶಿವಧರ್ಮ ಮಾಯಾವಾಗುತ್ತಿರುವುದೆಂದು ಹೇಳಿದಾಗ ದೇವಗಣವರ ಎಂಬುವವನು ಧರ್ಮೋದ್ಧಾರಕ್ಕಾಗಿ ಭುಲೋಕಕ್ಕೆ ದೇವರ ದಾಸಿಮಯ್ಯನಾಗಿ ಮುದನೂರು ರಾಮನಾಥ ಲಿಂಗದಲ್ಲಿ ಅವತರಿಸಿದನಂತೆ. ಉದಿಸಿದ ಕೂಡಲೆ ರಾಮನಾಥನು ಜಂಗಮಾಕೃತಿಯಿಂದ ಬಂದು ದೀಕ್ಷೋಪದೇಶ ಮಾಡಿ, ಗೃಹಸ್ಥಾಶ್ರಮವನ್ನವಲಂಬಿಸಿ ಶೈವಧರ್ಮವನ್ನು ಉದ್ಧಾರ ಮಾಡಬೇಕೆಂದು ಆದೇಶ ನೀಡಿ ಹೋದನಂತೆ. ದಾಸಿಮಯ್ಯನ ಪಾಯಸದ ಪರೀಕ್ಷೆಯಲ್ಲಿ ಉತ್ತೀರ್ಣಳಾದ ಸದ್ಗುಣ ಸಂಪನ್ನಳಾದ ದುಗ್ಗಳೆಯನ್ನು ಮದುವೆಯಾದುದು ಶಿವನಿಗೆ ವಸ್ತ್ರವನ್ನು ಅರ್ಪಿಸಿ ತವನಿಧಿಯನ್ನು ಪಡೆದುದು : ಯೋಗ್ಯ ಸತಿಯಿದ್ದರೆ ಗೃಹಸ್ಥ ಧರ್ಮವೆ ಶ್ರೇಷ್ಠವೆಂದು ಜಂಗಮರಿಬ್ಬರಿಗೆ ಉಪದೇಶಿಸಿದ್ದು, ಪೊಟ್ಟಲಕೆರೆಯ ರಾಣಿ ಸುಗ್ಗಲೆಗೆ ಲಿಂಗಧಾರಣೆ ಮಾಡಿಸಿದ್ದು, ಜೈನರಿಗೆ

ಲಿಂಗದೀಕ್ಷೆ ಕೊಟ್ಟಿದ್ದು, ಜೈನರೊಡನೆ ವಾದಮಾಡಿ ಸರ್ಪವನ್ನು ಶಿವಲಿಂಗ ಮಾಡಿದ್ದು, ಇವೆಲ್ಲಾ ವಿಚಾರಗಳು ಪುನರಾವರ್ತನೆಯಾಗಿದ್ದು 'ಉತ್ತರೇಶ್ವರ' ಎಂಬ ಹೆಸರಿನಿಂದ ಪ್ರಸಿದ್ದಿಗೆ ಬರುತ್ತದೆ. ಕೊನೆಗೆ ದಾಸಮಯ್ಯ ದುಗ್ಗಳೆ ಮತ್ತು ಪುತ್ರ ರಾಮಯ್ಯ - ಮೂವರು ರಾಮನಾಥನಲ್ಲಿ ಒಂದಾಗುತ್ತಾರೆ. ಇಲ್ಲಿ ಮೂಲಕಥೆ ಯೊಂದಿಗೆ ಅನೇಕ ಶರಣರ ಕಥೆಗಳು ಸೇರಿಕೊಂಡು ಕಥಾ ಪ್ರವಾಹಕ್ಕೆ ಅಡ್ಡಿಯನ್ನುಂಟುಮಾಡಿವೆ.

ಹರಿಹರ ಶಿಷ್ಯ ರಾಘವಾಂಕನ ಹೆಸರಿನಲ್ಲಿ ಪ್ರಕಟವಗಿರುವ ಅವಿದಿತ ಕವಿಯೊಬ್ಬನ 'ದೇವಾಂಗ ದಾಸಿಮಯ್ಯ' ಪುರಾಣದಲ್ಲಿ ದೇವರ ದಾಸಿಮಯ್ಯನಿಗೆ ದೇವಾಂಗ ಜನ್ಮವೊಂದು ಬಂದುದು, ಅವನು ನೇಯ್ಗೆಯ ಕೆಲಸ ಮಾಡಿ ವಸ್ತ್ರದಾನ ಮಾಡಿ ಮುಕ್ತಿ ಪಡೆದ ಕಥೆ ಇದೆ.

ಮುದನೂರಿನ ರಾಮನಾಥನನ್ನು ಪೂಜಿಸುವ ವಿಚಾರದಲ್ಲಿ ದಾಸಿಮಯ್ಯನಿಗೂ ಅಲ್ಲಿನ ಬ್ರಾಹ್ಮಣರಿಗೂ ಭಿನ್ನಾಭಿಪ್ರಾಯ ಬಂದು ದಾಸಿಮಯ್ಯ ಊರು ಬಿಟ್ಟು ಬಂದ ಮೇಲೆ ಅಲ್ಲಿನ ದೇವಸ್ಥಾನಗಳ ಬಾಗಿಲು ತೆರೆಯಲಿಲ್ಲ ಎಂಬ ಸಂಗತಿಯನ್ನು ನೋಡಿದರೆ ಹುಟ್ಟೂರಾದ ತನ್ನೂರಿಗೆ ಹೆಸರು ತಂದ ದಾಸಿಮಯ್ಯನ ಬಗ್ಗೆ ಆ ಊರಿನ ಜನರು ಹೆಚ್ಚಾಗಿ ದಾಸಿಮಯ್ಯನ ಬೆಂಬಲಕ್ಕೆ ಆ ಊರಿನ ಜನರು ನಿಂತಿರಬಹುದು. ಆ ಮೂಲಕ ದೇವಸ್ಥಾನಗಳಿಗೆ ಭದ್ರವಾದ ಬೀಗ ಮುದ್ರೆ ಹಾಕಿ ಪ್ರತಿಭಟಿಸಿರಬಹುದು.

ಕೊನೆಯದಾಗಿ ಮಹಂತ ದೇಶಿಕನ ಶಿವಶರಣವಿಲಾಸದಲ್ಲಿ ನವಲತ್ತು ಮಂದಿ ಶಿವಶರಣರ ಕಥೆಗಳಿದ್ದರೂ ದಾಸಿಮಯ್ಯನ ವಿಚಾರಕ್ಕೆ ಆದ್ಯತೆ ನೀಡಲಾಗಿದೆ. ಬಿಜ್ಜಳನು ಕೋಪಗೊಂಡು ತನ್ನ ಪ್ರಧಾನ ಸಚಿವರಾದ ಬಸವೇಶ್ವರನನ್ನು ಕರೆಸಿ ದಾಸಿಮಯ್ಯನಿಗೆ ಬುದ್ದಿವಾದ ಹೇಳುವಂತೆ ಆಜ್ಞಾಪಿಸದನೆಂದೂ ಆಗ ಬಸವಣ್ಣನು ನೃಪನಿಗೆ ವಿವರಿಸಿದಾಗ, ಬಿಜ್ಜಳನು ದಾಸಿಮಯ್ಯನಲ್ಲಿ ಕ್ಷಮೆಯಾಚಿಸಿದನಂತೆ.

ಹೀಗೆ ಹನ್ನೆರಡನೆ ಶತಮಾನದಿಂದ ಹಿಡಿದು ಹತ್ತೊಂಭತ್ತನೆಯ ಶತಮಾನದ ಅಂತ್ಯದವರೆಗೂ ದೇವರ ದಾಸಿಮಯ್ಯನನ್ನು ವಿವಿಧ ಗ್ರಂಥಗಳಲ್ಲಿ ಕೊಂಡಾಡಿದ್ದಾರೆ. ಕಾಲದಿಂದ ಕಾಲಕ್ಕೆ ಆತನ ವ್ಯಕ್ತಿತ್ವದ ಸುತ್ತ ಹತ್ತಾರು ಕಥೆಗಳು, ಪವಾಡಗಳು ಹುಟ್ಟಿಕೊಂಡಿವೆ.
ದಾಸಿಮಯ್ಯನಂತಹ ಶರಣಶ್ರೇಷ್ಠ, ಮಹಾತ್ಮ, ಮಹಾಮಹೀಮ ಕಣ್ಮರೆಯಾಗುತ್ತಿದ್ದಂತೆ ಅವನನ್ನು ಕುರಿತ ಇಂತಹ ಕಲ್ಪನೆ, ಕಥೆಗಳು ಹುಟ್ಟಿಕೊಳ್ಳುವುದು ಸಹಜ. ಆದ್ದರಿಂದ ದಾಸಿಮಯ್ಯನನ್ನು ಕುರಿತ ಕಥೆಗಳ ಸತ್ಯಾ ಸತ್ಯತೆಯ ಚರ್ಚೆ ಅನಗತ್ಯ.

## ಜೇಡರ ದಾಸಿಮಯ್ಯ : ದೇವರ ದಾಸಿಮಯ್ಯ

ಆದ್ಯ ವಚನಕಾರನಾದ ದಾಸಿಮಯ್ಯನ ನಿಜವಾದ ಹೆಸರು ಜೇಡರ ದಾಸಿಮಯ್ಯನೋ? ಅಥವಾ ದೇವರ ದಾಸಿಮಯ್ಯನೋ? ಎಂಬ ಜಿಜ್ಞಾಸೆ ಹಲವು ಕಾಲ ಕೆಲವರನ್ನು ಕಾಡಿತು. ಈ ಗೊಂದಲಕ್ಕೆ ಕಾರಣ ಕರ್ತನಾದ ಮೊದಲ ಕರ್ತೃ ಎಂದರೆ ಪಾಲ್ಕುರಿಕೆ ಸೋಮನಾಥ.

ಪೊಟ್ಟಲಕೆರೆಯವನಾದ ಚಾಲುಕ್ಯ ಇಮ್ಮಡಿ ಜಯಸಿಂಹನ ಹೆಂಡತಿ ಸುಗ್ಗಲದೇವಿಯ ಗುರುವಾದ ದಾಸಿಮಯ್ಯನನ್ನು 'ದೇವರ ದಾಸಿಮಯ್ಯ' ಎಂದೂ, ನೇಯ್ಗೆ ಕಾಯಕದವನಾದ ಶಂಕರ ದಾಸಿಮಯ್ಯನಿಂದ ಗರ್ವಭಂಗಕ್ಕೊಳಗಾದವನು ದೇವರ ದಾಸಿಮಯ್ಯ ಎಂದು ಈತ ತನ್ನ ತೆಲುಗು 'ಬಸವ ಪುರಾಣ' ದಲ್ಲಿ ಹೇಳಿದ್ದಾನೆ. ಇದಕ್ಕೆ ಕಾರಣ ಈತ ಕರ್ನಾಟಕದಿಂದ ದೂರವಿದ್ದುದು. ಇಲ್ಲಿ ನಡೆದ ಕ್ರಾಂತಿಯ ವಿಚಾರವನ್ನು, ಶಿವಶರಣರ ಕತೆಗಳನ್ನು ಪಾಲ್ಕುರಿಕೆ ಸೋಮನಾಥನು ಬೇರೆಯವರಿಂದ ಕೇಳಿ ಕಾವ್ಯ ರಚನೆ ಮಾಡಿರುವುದರಿಂದ ಈ ಗೊಂದಲ ಉಂಟಾಗಿರಬಹುದು. ಆದರೆ ಈತನನ್ನೇ ಅನುಸರಿಸಿ ಕನ್ನಡ ಬಸವ ಪುರಾಣ ಬರೆದ ಭೀಮಕವಿಯು ಈ ಗೊಂದಲಕ್ಕೆ ಪೂರ್ತಿ ಒಳಗಾಗಿಲ್ಲ. ತನ್ನ ಕಾವ್ಯದ ಮೂಲದಲ್ಲಿರುವ ಈ ಗೊಂದಲವನ್ನು ಗಮನಿಸಿ ತನಗೆ ಗೊತ್ತಿದ್ದ ಕಾರಣದಿಂದಾಗಿ ಈ ಸಮಸ್ಯೆ ನಿವಾರಿಸಿಕೊಂಡಿದ್ದಾನೆ. ಶಂಕರ ದಾಸಿಮಯ್ಯನ ಸಮಕಾಲೀನನನ್ನು 'ಜೇಡರ ದಾಸಿಮಯ್ಯ' ನೆಂದು ಪೊಟ್ಟಲು ಕೆರೆ ಯಲ್ಲಿದ್ದು ಸುಗ್ಗಲೆಗೆ ಗುರುವಾಗಿದ್ದವನನ್ನು ದೇವರ ದಾಸಿಮಯ್ಯನೆಂದು ಹೇಳುತ್ತಾನೆ. ಅವನಿಗೂ ಕೊಂಚ ಅನುಮಾನವಿದ್ದಿರಬಹುದು. ಏಕೆಂದರೆ ದಾಸಿಮಯ್ಯನ ಕಥೆ ಹೇಳುವಾಗ ಒಮ್ಮೆ ಅವನನ್ನು 'ಜೇಡರ ದಾಸಿಮಯ್ಯ' ಎಂದು ಕರೆದಿದ್ದಾನೆ. ದಾಸಿಮಯ್ಯನ ಅಂಕಿತ 'ರಾಮ ನಾಥ' ಎಂಬುದರಲ್ಲೂ ಗೊಂದಲ ವಾದಂತಿದೆ. ಇವನು ಸೋಮನಾಥನನ್ನೇ ಅನುಸರಿಸಿದ್ದಾನೆ.

ಪಾಲ್ಕುರಿಕೆ ಸೋಮನಾಥನ 'ದ್ವಿಪದ' ಕಾವ್ಯವನ್ನು ಚಂಪೂ ಕಾವ್ಯವಾಗಿ ಮಾರ್ಪಡಿಸಿದ ತೆಲುಗು ಕವಿಯಾದ 'ಪಿಡುಪರ್ತಿ ಸೋಮನಾಥ' ಎಂಬ ಕವಿಯು ಇಬ್ಬರು ದಾಸಿಮಯ್ಯರನ್ನು 'ದೇವರ' ಎಂಬ ವಿಶೇಷಣದಿಂದಲೇ ಕರೆದಿದ್ದಾನೆ. ಹೀಗಾಗಿ ಗೊಂದಲವು ಸೋಮನಾಥನಿಂದ ಶುರುವಾಗಿ ಮುಂದಿನವರಿಗೆಲ್ಲ ಹರಡಿದಂತಿದೆ!

ಖ್ಯಾತ ಸಂಶೋಧಕರಾದ ಡಾ. ಎಂ. ಚಿದಾನಂದಾಮೂರ್ತಿಯವರು ಈ ಬಗ್ಗೆ ಚರ್ಚಿಸುತ್ತಾ ಜೇಡರ ದಾಸಿಮಯ್ಯ ಹಾಗೂ ದೇವರ ದಾಸಿಮಯ್ಯರು ಇವು ಒಬ್ಬನೇ ವ್ಯಕ್ತಿಯ ಹೆಸರಲ್ಲವೆಂದು, ಬೇರೆ ಬೇರೆ ವ್ಯಕ್ತಿಗಳ ಹೆಸರೆಂದು ಹೇಳಿರುವರು. ಈ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾ, ದೇವರ ದಾಸಿಮಯ್ಯ ವಚನಕಾರನಲ್ಲ, ಜೇಡರ ದಾಸಿಮಯ್ಯನೇ ವಚನಕಾರ. ಈತನೇ ಮುಂದಿನ ವಚನಕಾರರಿಂದ ಸ್ತುತಿಸಲ್ಪಟ್ಟವನು. ಈ ಅಭಿಪ್ರಾಯ ಸಮರ್ಥನೆಗೆ ಅವು ನೀಡುವ ಕಾರಣ : ದಾಸಿಮಯ್ಯನಿಗೆ ಸಂಬಂಧಿಸಿದ ಎಲ್ಲ ಶಾಸನಗಳಲ್ಲೂ ಜೇಡರ ಅಥವಾ ಜಾಡರ ಎಂಬ ವಿಶೇಷಣವಿದೆ. ಬಸವಣ್ಣ ಮತ್ತು ನಂತರದವರೆಲ್ಲ ಅವನನ್ನು 'ಜೇಡರ ದಾಸಿಮಯ್ಯ' ನೆಂದೇ ಕರೆದಿದ್ದಾರೆ. ಈತನ ವಚನಗಳಲ್ಲಿ 'ಜೇಡರ' ಎಂಬ ವಿಶೇಷಣವಿದೆಯೇ ವಿನಾ 'ದೇವರ' ಎಂದಿಲ್ಲ ಎಂದಿದ್ದಾರೆ. ಡಾ. ಚಿ. ಮೂ. ರವರ ಹೇಳಿಕೆ ಮುಂದಿನ ಸಂಶೋಧಕರ ಆಸಕ್ತಿ ಕೆರಳಿಸಿತು.

ಮತ್ತೋರ್ವ ಸಂಶೋಧಕರಾದ ಡಾ. ಎಲ್. ಬಸವರಾಜು ರವರು ಬಸವಣ್ಣನ ವಚನಗಳಲ್ಲಿ ಪ್ರಸ್ತಾಪಿಸಿರುವ ಜೇಡರ ದಾಸಿಮಯ್ಯ, ದಾಸಯ್ಯ, ದಾಸಿಮಯ್ಯ, ದಾಸಿದೇವ ಎಂಬುದು, ಬಸವಣ್ಣನ ಕಿರಿಯ ಸಮಕಾಲೀನನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ 'ಶಿವತತ್ವಸಾರ' ದಲ್ಲಿ 'ದೇಡರ ದಾಸಿಮಯ್ಯ' ಎಂದೂ, ಪಾಲ್ಕುರಿಕೆ ಸೋಮನಾಥನು ಗಣಸಹಸ್ರನಾಮದಲ್ಲಿ ದೇವರ ದಾಸಯ್ಯ

ಎಂದು ಕರೆದಿರುವರು. ಇವನು ಮುದನೂರಿನವನಾದುದರಿಂದ 'ಮುದನೂರು ದಾಸಯ್ಯ' ಎಂದೂ ಆಮೇಲಿನವರು ಕೆಲವರು ಕರೆದಿದ್ದಾರೆ. ಹತ್ತೊಂಭತ್ತನೇ ಶತಮಾನದ ಗ್ರಂಥಗಳಲ್ಲಿ ದೇವದಾಸ ಅಥವಾ ದೇವರ ದಾಸಿಮಯ್ಯ ಎಂದಿದೆ. ಹಿಂದಿನಂತೆ ಜೇಡರ ದಾಸಿಮಯ್ಯನೆಂದರೆ ನೇಯ್ಗೆಯ ವೃತ್ತಿಯ ದಾಸಿಮಯ್ಯ. ಇತ್ತೀಚಿನ ದೇವರ ದಾಸಿಮಯ್ಯನೆಂದರೆ ದೇವರಿಗೆ ದಾಸನಾದವನು ಎಂದು ಹೇಳಿದ್ದಾರೆ. ಆ ಹೆಸರಿನ ಮೊದಲ ಭಾಗ ಜೇಡರ ಆಗಲಿ, ದೇವರ ಆಗಲಿ ಅದರಲ್ಲಿ ಅಸಂಗತವಾದುದೇನೂ ಇಲ್ಲ. ಆದರೆ 'ದಾಸಿಮಯ್ಯ' (ದಾಸ + ಅಮ್ಮ + ಅಯ್ಯ ) ಎಂದಿರುವುದು ಸಾಧುವಲ್ಲ. ಆದ್ದರಿಂದ 'ದಾಸಿಮಯ್ಯ' ಎಂಬ ನಾಮಾಂಕಿತಕ್ಕಿಂತ 'ಜೇಡರ ದಾಸಮಯ್ಯ' ಎಂಬ ರೂಪವೇ ಅತ್ಯಂತ ಪ್ರಾಚೀನ ಮತ್ತು ಸ್ಪಷ್ಟ.

ಒಟ್ಟಿನಲ್ಲಿ ಜೇಡರ ದಾಸಮಯ್ಯ, ಮುದನೂರು ದಾಸಯ್ಯ, ದೇವರ ದಾಸಮಯ್ಯ - ಈ ಮೂರು ಹೆಸರು ಪ್ರಸಿದ್ಧ ವಚನಕಾರನಾದ ಒಬ್ಬನೇ ವ್ಯಕ್ತಿಗೆ ಅನ್ವಯಿಸುತ್ತದೆಂಬುದು ನಿಶ್ಚಿತ. ವಸ್ತುಸ್ಥಿತಿ ಹೀಗಿರುವಾಗ ದೇವರ ದಾಸಿಮಯ್ಯ ನೆಂಬ ಹೆಸರು ಬಸವನ ಸಮಕಾಲೀನನೊಬ್ಬ ಶರಣನಿಗೆ ಅನ್ವಯಿಸುವುದೆಂದೂ, ಬಸವಪೂರ್ವ ಪ್ರಸಿದ್ಧ ವಚನಕಾರನ ಹೆಸರು "ಮುದನೂರು ದಾಸಯ್ಯ" ಎಂಬುವವನೇ ಬೇರೆ ಎಂಬ ಊಹೆ ತಕ್ಕುದಲ್ಲ.

ಈ ವಿವಾದಕ್ಕೆ ಕಾರಣವನ್ನು ಡಾ|| ಪಿ. ವಿ ನಾರಾಯಣ ರವರು ವಿಶ್ಲೇಷಿಸುತ್ತಾ ಜೇಡರ ದಾಸಿಮಯ್ಯನು ಹೇಳುವ 'ಸೂಳ್ನುಡಿ' 'ಮೃಡ ಭಕ್ತರ ನುಡಿ ಗಡಣ', ಬಸವಣ್ಣನು ಬಳಸುವ 'ಆದ್ಯರ ವಚನ' - ಇವು ಹಿಂದಿದ್ದ ಶಿವರಣರ 'ವಚನ' ಗಳನ್ನೇ ಸೂಚಿಸುತ್ತವೆಂದು ಕೆಲವರ ನಂಬಿಕೆ. ಆದರೆ ಮೇಲಿನ ಮಾತುಗಳು ತಮಗಿಂತ ಹಿಂದಿದ್ದ ಶಿವಭಕ್ತರ ಮಾತುಗಳಾಗಿರಬಹುದು : ಉಪದೇಶವಾಗಿರಬಹುದು ; ಹಾಡುಗಳ ರೂಪದಲ್ಲಿರಬಹುದು ; ಅಥವಾ ಸೂಚಿಸುವ ಸಾಧ್ಯತೆಯಾಗಿರಬಹುದು : 'ವಚನ' ಎಂಬ ಮಾತು ನಾವೀಗ ಗುರುತಿಸುವ ವಚನಗಳನ್ನು ಸೂಚಿಸುತ್ತದೆ ಎಂಬುದನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಆದ್ಯರು ಎಂಬ ಮಾತು ಹಿಂದಿನ ಹಿರಿಯರು, ಪುರಾತನರು ಎಂಬರ್ಥದಲ್ಲಿ ಬಳಸಿರಬಹುದು ; ಜೊತೆಗೆ ಸಮಕಾಲೀನ ಶಿವ ಶರಣರನ್ನು ಸೂಚಿಸಿರುವ ಸಂಭವವಿರಬಹುದು . ಈ ಮಾತುಗಳನ್ನೇ ಆಧಾರವಾಗಿಟ್ಟುಕೊಂಡು ನೋಡಿದರೆ ಜೇಡರ ದಾಸಿಮಯ್ಯನಿಗಿಂತ ಹಿಂದೆ 'ವಚನ' ಕಾರರಾಗಲಿ, ವಚನ ಸಾಹಿತ್ಯವಾಗಲಿ ಇತ್ತೆಂದು ಹೇಳಲು ಬರುವುದಿಲ್ಲ.

ಡಾ. ರಂ. ಶ್ರೀ. ಮುಗಳಿಯವರ ತಮ್ಮ ಕನ್ನಡ ಸಾಹಿತ್ಯ ಚರಿತ್ರೆ ( ಕಿರಿಯ ಆವೃತ್ತಿ ) ಕೃತಿಯಲ್ಲಿ ವಚನ ವಾಙ್ಮಯ ( ಆದ್ಯ ವಚನಕಾರರು ) ಎಂಬ ಅಧ್ಯಾಯದಲ್ಲಿ ಜೇಡರ ದಾಸಿಮಯ್ಯ ಮತ್ತುಶಂಕರ ದಾಸಿಮಯ್ಯ ಇಬ್ಬರೂ ಸಮಕಾಲೀನರೆಂದು ಚಾಲುಕ್ಯ ಜಯಸಿಂಹನ (1015 - 42) ಕಾಲದಲ್ಲಿ ಇದ್ದವರೆಂದು, ಹರಿಹರ, ಭೀಮಕವಿ , ಬ್ರಹ್ಮ ಶಿವರು ದಾಸಿಮಯ್ಯನನ್ನು ಉಲ್ಲೇಖಿಸಿರುವುದನ್ನು ತಿಳಿಸುತ್ತಾ, 'ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪು ನೀರ ಸವಿದಂತಾಯಿತ್ತಯ್ಯಾ ಎನ್ನ ಯುಕ್ತಿ '- ಎಂಬ ಬಸವಣ್ಣನ ಉಕ್ತಿ ಈತನು ಬಸವನಿಗೆ ಪೂರ್ವಿಕನೆಂದೂ , ಇದು ವಚನಗಳ ಪೂರ್ವ ಪರಂಪರೆಯನ್ನು ಸೂಚಿಸಿರುವುದಾಗಿ ತಿಳಿಸಿದ್ದಾರೆ .

ದಾಸಿಮಯ್ಯನ ವಚನಗಳಲ್ಲಿ ಉತ್ಕಟವಾದ ವೀರಶೈವನಿಷ್ಠೆ, ನಿಷ್ಠುರವಾದ ಸ್ಪಷ್ಟ ವಾಕ್ಯತೆ, ಮಾರ್ಮಿಕವಾದ ಸಂಕ್ಷಿಪ್ತ ಶೈಲಿ, ಉಚಿತವಾದ ದೃಷ್ಟಾಂತಗಳ ಸಂಪತ್ತಿ ಈ ಗುಣಗಳು ಎದ್ದು ಕಾಣುತ್ತವೆ ಎಂದಿದ್ದಾರೆ.

ಹಾಗೆಯೆ ದಾಸಿಮಯ್ಯನ ವಚನಗಳಲ್ಲಿ ಜನಜೀವನ ವಿಮರ್ಶೆ, ಅನುಭಾವದ ಅನನ್ಯತೆ, ಆಧ್ಯಾತ್ಮ ಗುಣ ಇರುವುದನ್ನು ಪ್ರಶಂಶಿಸಿ, ವಿಡಂಬನೆಯ ಅತಿ ಟೀಕೆ, ಮಾತಿನ ಒರಟುತನ ಇದೆ ಎಂದು ಟೀಕಿಸಿದ್ದಾರೆ.

"ಆದರೆ ದಾಸಿಮಯ್ಯನ ವಚನಗಳು ಸಾಹಿತ್ಯ ದೃಷ್ಟಿಯಿಂದ ಬಹು ಉತ್ತಮವಾದ ವರ್ಗಕ್ಕೆ ಸೇರತಕ್ಕವಾಗಿವೆ ಎಂಬುದು ಅತ್ಯುಕ್ತಿ" - ಎಂಬ ಮಾತನ್ನು ಒಪ್ಪಲಾಗುವುದಿಲ್ಲ. ನಂತರದ ವಚನಕಾರರ ಸಾಹಿತ್ಯಕ್ಕೆ ಪೂರ್ವದ ಸಾಹಿತ್ಯ ಹೋಲಿಸುವುದು ತಕ್ಕುದಲ್ಲ. ಅದು ಬೀರಿದ ಪ್ರಭಾವಕ್ಕೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ ಬೆಂಗಳೂರು ಇವರು ಪ್ರಕಟಿಸಿರುವ ಸಂಕೀರ್ಣ ವಚನ ಸಂಪುಟ - 2 ರಲ್ಲಿ ವಚನಕಾರರ ಬಗ್ಗೆ ಚರ್ಚಿಸುತ್ತಾ ಡಾ. ಎಸ್. ವಿದ್ಯಾಶಂಕರ್ ರವರು "ವಚನಕಾರರಲ್ಲಿ ನಿಜಗುಣಯೋಗಿ, ಚಂದಿಮರಸ, ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯ - ಈ ನಾಲ್ವರು ಬಸವನಿಗಿಂತ ಸ್ವಲ್ಪ ಹಿರಿಯರು. ಇವರಲ್ಲಿ ಸಾಮಾಜಿಕವಾಗಿ ಸ್ಪಂದಿಸಿದವನು ದಾಸಿಮಯ್ಯನೊಬ್ಬನೆ. ನಿಜವಾದ ಅಂತಃ ಸತ್ವವುಳ್ಳ ವಚನಗಳನ್ನು ಜೇಡರ ದಾಸಿಮಯ್ಯನಲ್ಲಿ ನಾವು ಕಾಣುತ್ತೇವೆ. ಒಂದು ವಚನ ಸಾಹಿತ್ಯ ಪ್ರಕರವಾಗಿ ರೂಪುಗೊಳ್ಳಲು ಹೊರಟ ಸ್ಥಿತಿಯನ್ನು ಹಾಗೂ ಬಸವಾದಿ ಶಿವ ಶರಣರು ನಡೆಸಿದ ಚಳುವಳಿಯ ಪೂರ್ವದ ಸಮಾಜೋಧಾರ್ಮಿಕ ಸ್ಥಿತಿ ಗತಿಗಳ ಪರಿಚಯವನ್ನು ನಾವು ಅಲ್ಲಿ ಗುರುತಿಸಬಹುದು. ಆದ್ಯ ವಚನಕಾರನಾಗುವ ಹಾಗೂ ಮುಂದಿನವರಿಗೆ ಮಾರ್ಗದರ್ಶಕನಾಗುವ ಸಕಲ ಗುಣಗಳನ್ನೂ ದಾಸಿಮಯ್ಯ ಹೊಂದಿರುವನು. ದೇಸೀಗಬ್ಬವಾದ ತ್ರಿಪದಿ ವಚನವಾಗುವ ಸಾಧ್ಯತೆಯನ್ನು ನಾವಲ್ಲಿ ಕಾಣುತ್ತೇವೆ. ವಚನದ ರೂಪ ಮತ್ತು ಶಿಲ್ಪ ರೂಪುಗೊಂಡು ಬಸವಾದಿ ಶರಣರಿಗೆ ಅದು ಅಭಿವ್ಯಕ್ತಿ ಮಾಧ್ಯಮ ವಾದುದನ್ನೂ ನಾವು ನೋಡ ಬಹುದು" - ಎಂಬ 'ವಿದ್ಯಾಶಂಕರ್' ರವರ ಹೇಳಿಕೆ ದಾಸಿಮಯ್ಯನ ಸ್ಥಾನ ಮಾನಕ್ಕೆ ಸಲ್ಲಿಸಿದ ಗೌರವವಾಗಿದೆ.

'ಜೇಡ' ಎಂಬ ಸಂಧಿ ಪದಿ ತನ್ನ ಜೊಲ್ಲಿನಿಂದ ಬಲೆ ಹೆಣೆಯುವ ವಿಧಾನವೇ 'ನೇಯ್ಗೆ' ಕಾಯಕಕ್ಕೆ ಸ್ಫೂರ್ತಿಯಾಗಿರಬಹುದು. 'ನೇಯ್ಗೆ'ಯವರಿಗೆ 'ದೇವಾಡಿಗ' - ಎಂಬ ಹೆಸರುಗಳು ರೂಢಿಯಲ್ಲಿರುವುದರಿಂದ ಜೇಡರು > ದೇವಾಂಗ > ದೇವಾಡಿಗ > ದೇವರ ಆಗುವಂತೆ 'ಜೇಡರ ದಾಸಿಮಯ್ಯ' ಕೆಲವರ ಬಾಯಲ್ಲಿ ದೇವರ ದಾಸಿಮಯ್ಯ ನಾಗಿರಬಹುದು. ಆದ್ದರಿಂದ ಜೇಡರ ದಾಸಿಮಯ್ಯ, ದೇವರ ದಾಸಿಮಯ್ಯ ನೆಂಬ ಹೆಸರಿನ ವ್ಯಕ್ತಿ ಒಬ್ಬನೇ ಎಂದು ಭಾವಿಸಬಹುದು.

ಅಡಿ ಟಿಪ್ಪಣಿ :

1. ಡಾ|| ಡಿ. ಎಲ್. ನರಸಿಂಹಾಚಾರ್, ದೇವರ ದಾಸಿಮಯ್ಯ ಪ್ರಶಸ್ತಿ, ಪುಟ -399.
2. ಬಸವೇಶ್ವರ ಷಟ್ ಸ್ಥಲ ವಚನದ ಕಥಾಸಾರ, ಪುಟ - 26

# ಅಧ್ಯಾಯ - 2

ಆದ್ಯ ವಚನಕಾರನೆಂಬ ಮನ್ನಣೆಗೆ ಪಾತ್ರನಾಗಿರುವ ಜೇಡರ ದಾಸಿಮಯ್ಯನ ವಚನಗಳು ನಂತರದ ವಚನಕಾರರ ಮೇಲೆ ಬೀರಿದ ಪ್ರಭಾವ, ಪರಿಣಾಮಗಳ ತೌಲನಿಕ ವಿಶ್ಲೇಷಣೆ.

ಒಂದು ಅನುಭವ ಒಬ್ಬ ವ್ಯಕ್ತಿಗೆ ಆಗಬೇಕೆಂಬ ನಿಯಮವೇನು ಇಲ್ಲ. ಅನೇಕರು ಅದನ್ನು ಅನುಭವಿಸಿ ಆನಂದಿಸಿದರೆ, ಕೆಲವರಿಗೆ ಆ ಆನಂದದ ಅನುಭೂತಿಯನ್ನು ವರ್ಣಿಸಲು ಬರುವುದಿಲ್ಲ. ಹಲವರು ತಾವು ಕೇಳಿದ, ಓದಿದ, ತಿಳಿದ ಸಂಗತಿಗಳನ್ನು ಅವು ಸಾಧಾರಣವಾಗಿದ್ದರೂ ಅದಕ್ಕೊಂದು ಚಂದದ ರೂಪ ಕೊಟ್ಟು, ತಮ್ಮ ಕಲ್ಪನಾ ವಿಲಾಸ ಮತ್ತು ಬುದ್ಧಿ ಶಕ್ತಿಯಿಂದ ಅಥವಾ ಸೃಜನಾಶೀಲ ಪ್ರತಿಭೆಯಿಂದ ಅದಕ್ಕೊಂದು ಸುಂದರ ಚೌಕಟ್ಟು ನೀಡುತ್ತಾರೆ: ಅಮರ ಸಾಹಿತ್ಯ ರಚಿಸಿ ಆ ಮೂಲಕ ಕೀರ್ತಿ ಶರೀರದಲ್ಲಿ ಶಾಶ್ವತವಾಗಿ ಉಳಿದು ಬಿಡುತ್ತಾರೆ.

ಈ ಕಾರಣದಿಂದಾಗಿಯೇ ನವೋದಯ ಕಾವ್ಯದ ಪ್ರವರ್ತಕ ಬಿ. ಎಂ. ಶ್ರೀಯವರು ಹೇಳಿದ ಃಜನವಾಣಿ ಬೇರು : ಕವಿವಾಣಿ ಹೂವು ಃಎಂಬ ಮಾತು ಸ್ಮರಣಾರ್ಹ.

ಇದನ್ನೆ ವಿಮರ್ಶಕರ ಸಾಹಿತ್ಯದಲ್ಲಿ ಆಗಾಗ ಪ್ರೇರಣೆ, ಪ್ರಭಾವ, ಅನುಕರಣೆ, ಕೃತಿಚೌರ್ಯ - ಇಂತಹ ಪದಗಳು ಆಗಾಗ ಬಳಕೆಯಾಗುತ್ತಲೇ ಇರುತ್ತವೆ.

ಪ್ರಸ್ತುತ ನಾವು ವಚನಬ್ರಹ್ಮ ಜೇಡರ ದಾಸಿಮಯ್ಯ ನ ಪ್ರಭಾವ, ಪ್ರೇರಣೆ ಹೇಗೆ ಉಳಿದ ವಚನಕಾರರ ಮೇಲೆ ಆಗಿದೆ ಎಂಬುದನ್ನು ಪರಿಶೀಲಿಸೋಣ.

## ಬಸವಣ್ಣ ಮೇಲೆ ದಾಸಿಮಯ್ಯನ ಪ್ರಭಾವ :-

ಬಸವಣ್ಣ ತಮ್ಮ ವಚನಗಳಲ್ಲಿ ಜೇಡರ ದಾಸಿಮಯ್ಯ ನನ್ನು ಆದರ್ಶ ವ್ಯಕ್ತಿ, ಮಾದರಿ ಮನುಷ್ಯ ನನ್ನಾಗಿ ಭಾವಿಸಿ ವಿಶೇಷವಾಗಿ ಹಾಡಿ ಹೊಗಳಿದ್ದಾನೆ. ಭಕ್ತಿ ಇಲ್ಲದ ಬಡವ ನಾನಯ್ಯ - ಎಂದು ಆತ್ಮ ವಿಮರ್ಶೆ ಮಾಡಿಕೊಳ್ಳುತ್ತಾ, ತನ್ನ ಭಕ್ತಿಯ ಭಿಕ್ಷಾ ಪಾತ್ರೆ ತುಂಬಲು ಪುರಾತನರನ್ನು ಬೇಡುತ್ತಾ ದಾಸಯ್ಯನ ಮನೆಯಲು ಬೇಡಿದೆ ಎಂದು ಅವನ ಕೃಪೆಗಾಗಿ ಹಂಬಲಿಸುತ್ತಾನೆ. ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು, ತವರಾಜದ ನೊರೆ ತೊರೆಯಂತೆ ಆದ್ಯರ ವಚನ ವಿರಲು ಎಂಬ ಮಾತು ಹೇಳಿ ತಮಗಿಂತ ಹಿಂದಿದ್ದ ವಚನಗಳ ಮಹತ್ವ ಎತ್ತಿ ಹಿಡಿದಿದ್ದಾನೆ. ಹಾಗೆ ಈ ವಿಶಿಷ್ಟ ಮಾರ್ಗದಲ್ಲಿ ಸಾಧನೆ ಮಾಡಿ ಗೆದ್ದ ಮಹಾ ಮಣಮರ ಚಾರಿತ್ರ್ಯ ಅವನ ಕಣ್ಣೆದುರಿಗಿತ್ತು. ಮುಗ್ಧ ಭಕ್ತಿಯಿಂದ ಶಿವನಂತಹ ದೈವಾಂಶ ಸಂಭೂತರನ್ನು ಸೋತು - ಗೆದ್ದ -

ದೇವರ ದಾಸಿಮಯ್ಯನನ್ನು ನೆನೆಯುತ್ತಾ
ಸೋಲ ಬಲ್ಲವರು : ಗೆಲಲರಿಯರಯ್ಯ.
ತನು - ಮನ ಧನದಲ್ಲಿ ವಂಚನೆಯ ನರಿಯರಯ್ಯ
ದಾಸ - ಸಿರಿಯಾಳನವರು.
ಕೂಡಲಸಂಗನ ಶರಣರು ಉಪಚಾರ ವನರಿಯರಯ್ಯ.
ಎಂದು ಹೇಳಿದ್ದಾನೆ.

ದಾಸನ ವಸ್ತ್ರವ ಬೇಡಿದಾತನೀ ದೇವ! ಎಂದು ಗುಣಗಾನ ಮಾಡುತ್ತಾ, ದಾಸನ ವಸ್ತ್ರವ ಸೀಳಿದಂದಿನಿಂದ ಭಯ ಕಾಣೆರಣ್ಣ ಎಂದು ಕೊಂಡಾಡುತ್ತಾ ಅವರು ಏರಿದ ಎತ್ತರಕ್ಕೆ ತಾನು ಏರಲು ಸಾಧ್ಯವೇ ಎಂದು ಪ್ರಶ್ನಿಸಿ ಕೊಳ್ಳುತ್ತಾನೆ. ಮೇಲಿನ ಉದಾಹರಣೆಗಳಷ್ಟೆ ಸಾಕು ದಾಸಿಮಯ್ಯ ಬಸವಣ್ಣನ ಮೇಲೆ ಮಾಡಿದ ಮೋಡಿ ಎಂತಹುದು ಎಂಬುದನ್ನು ತಿಳಿಯಲು ತನ್ನ ಉದ್ಧಾರ ತನ್ನಿಂದ ಮಾತ್ರ ಸಾಧ್ಯ - ಅನ್ಯರು ಇನ್ನೊಬ್ಬನನ್ನು ಉದ್ಧಾರ ಮಾಡುವರೆಂಬುದು ಭ್ರಮೆ ಹಾಗೆ ಪುಣ್ಯ ಸಂಪಾದನೆ ಇನ್ನೊಬ್ಬರ ಪಾಪ ಪುಣ್ಯ ನಮ್ಮದಾಗುವುದಿಲ್ಲ. ಧರ್ಮ - ಕರ್ಮವೆಲ್ಲ ನಮ್ಮ ನಡವಳಿಕೆ, ಕಾರ್ಯಗಳಿಂದ ನಿರ್ಧರಿಸಲ್ಪಡುತ್ತದೆ.
ಇದರ ಅರಿವಿದ್ದ ದಾಸಿಮಯ್ಯನು, ದುಡ್ಡು ಕೊಟ್ಟು ಪುರೋಹಿತರ ಕೈಯಿಂದ ತಮ್ಮ ಮನೆ ದೇವರ ಪೂಜೆ ಮಾಡಿಸಿ ಕೃತಾರ್ಥರಾದೆವು ಎಂದು ಬೀಗುವ ಸಿರಿವಂತರನ್ನು ಹೀಗೆ ಖಂಡಿಸಿದ್ದಾನೆ.

ಸತಿಯರ ಸಂಗವನು ಅತಿಶಯದ ಗ್ರಾಸವನು
ಪೃಥಿವಿಗೀಶ್ವರನ ಪೂಜೆಯನು, ಅರಿವುಳ್ಳಡೆ
ಹೆರರ ಕೈಯಿಂದ ಮಾಡಿಸುವರೆ ರಾಮನಾಥ.
ಎಂದರೆ ಬಸವಣ್ಣನು ಇದೇ ಅಭಿಪ್ರಾಯವನ್ನು ಹೀಗೆ ಮಂಡಿಸುತ್ತಾನೆ.
ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
ಬೇರೊಬ್ಬರ ಕೈಯಲು ಮಾಡಿಸಲು ಬಹುದೇ ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವನು
ತಾ ಮಾಡ ಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲು ಮಾಡಿಸಲುಬಹುದೆ?
ಕೆಮ್ಮನುಪಚಾರಕ್ಕೆ ಮಾಡುವರಲ್ಲದೆ
ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವ.

ಭಕ್ತನಿಗೆ ನಂಬಿಕೆ ಬೇಕು, ತಾನು ಸಾಗುತ್ತಿರುವ ದಾರಿಯ ಬಗ್ಗೆ ನಿಷ್ಠೆ ಇರಬೇಕು. ಸಂದೇಹ ಸಂಶಯಗಳಿದ್ದಲ್ಲಿ ಶಿವನಿರವುದಿಲ್ಲ. ಅಂತಹವರು ಶಿವನಿಗೂ ಬೇಕಿಲ್ಲ. ಈ ಅಭಿಪ್ರಾಯ ಕುರಿತು ದಾಸಿಮಯ್ಯನು

ನೆರೆನಂಬಿ ಕರೆದಡೆ ನರಿ ಕುದುರೆಯಾಗಿ ಹರಿಯದೆ ?
ಜಗವೆಲ್ಲರಿಯಲು ತೊರೆಯೊಳಗೆ ಬಿದ್ದ ಲಿಂಗ
ಕರೆದರೆ ಬಂದುದು ಕರಸ್ಥಲಕ್ಕೆ!
ನಂಬದೆ ಕರೆದವರ ಹಂಬಲನೊಲ್ಲ ನೆಮ್ಮ ರಾಮನಾಥ

ಎಂದರೆ ಬಸವಣ್ಣನ ವಿವರಣೆ ನೋಡೋಣ.

ನಂಭರು ನಚ್ಚರು ಬರಿದೆ ಕರೆವರು
ನಂಬಲಯರೀ ಲೋಕದ ಮನುಜರು
ನಂಬಿ ಕರೆದಡೆ ಓ ಎನ್ನನೇ ಶಿವನು ?
ನಂಬದೇ ನಚ್ಚದೇ ಬರಿದೆ ಕರೆವರ
ಕೊಂಬ ಮೆಟ್ಟಿ ಕೂಗೆಂದ ಕೂಡಲ ಸಂಗಮದೇವ.

ಮೇಲು ಕೀಳು ಎಂಬ ಭೇದಭಾವ ಮನುಷ್ಯ ಮಾಡಿ ಕೊಂಡಿದ್ದು, ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಭಕ್ತಿಗೆ, ಜ್ಞಾನಕ್ಕೆ ಮೇಲು - ಕೀಳಿಲ್ಲ. ಭಕ್ತನ ಜಾತಿ, ವೃತ್ತಿ, ಧರ್ಮ ಯಾವುದೇ ಆಗಿರಲಿ, ಭಕ್ತರೆಲ್ಲರೂ ಒಂದೇ ಕುಲದವರು.

ಪರವಧುವ ನೆರೆಯದೆ : ಪರಧನವ ತುಡುಕದೆ
ಪರದೈವದಿಚ್ಛೆ ವಡೆಯದೆ
ಗುರುಲಿಂಗ ಜಂಗಮಕ್ಕೆ ವರದಾಸನಾದಾತನೆ
ಧರೆ ಮೂರಕ್ಕೆ ಗುರುವಾಗಿಪ್ಪನೈ , ರಾಮನಾಥ.

ಇಂತಹ ಪ್ರಾಮಾಣಿಕ ಭಕ್ತ ಮಾತ್ರ ಇಡೀ ಜಗತ್ತಿಗೆ ( ಸಮಾಜಕ್ಕೆ) ಗುರುವಾಗುತ್ತಾನೆ. ಇದನ್ನೆ ಬಸವಣ್ಣನವರು ಇಂತಹ ಕಟ್ಟು - ನಿಟ್ಟಿನ ಬದುಕು ಸಾಗಿಸಲು ಛಲ, ಅಗತ್ಯವೆಂದು ಹೇಳಿದ್ದಾರೆ.

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗ ಜಂಗಮವೊಂದೆಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ಕೂಡಲ ಸಂಗಮದೇವ.

ನಿಜ, ಯಾವುದೇ ದಿಟ್ಟ ನಿರ್ಧಾರ ಮಾಡಲು, ಅದರಂತೆ ನಡೆಯಲು ಹಟ ಬೇಕು. ದುರ್ಬಲ ಮನಸ್ಸಿನವನು ತ್ರಿವಿಧ ಅರಿಯುವುದಕ್ಕಾಗಲಿ, ಹೆಣ್ಣು, ಹೊನ್ನು, ಮಣ್ಣು ನಿರಾಕರಿಸುವುದಕ್ಕಾಗಲಿ ಸಂಕಲ್ಪ ಶಕ್ತಿ ಬೇಕು : ಪರಮಾತ್ಮನು ಸರ್ವಶಕ್ತ, ಸರ್ವವ್ಯಾಪಿ, ಅವನಿಲ್ಲದ ಸ್ಥಳವಿಲ್ಲ, ಜಾಗವಿಲ್ಲ, ಹೀಗೆ ಅಣುರೇಣು, ತೃಣ ಕಾಷ್ಠಗಳಲ್ಲಿ , ಪರ್ವತಾದಿಗಳಲ್ಲಿ - ಹೀಗೆ ಎಲ್ಲದರಲ್ಲಯೂ ವ್ಯಾಪಿಸಿರುವವನು ಪರಮಾತ್ಮ ಎಂದು ದಾಸಿಮಯ್ಯನು

ಮಣಿಗಳ ಸೂತ್ರದಂತೆ ತ್ರಿನಯನ , ನೀನಿಪ್ಪೆಯಯ್ಯ ,
ಎಣಿಸುವಡೆ ತನು ನಿನ್ನ ಆತ್ಮನೊಬ್ಬನೆ
ಅಣು ರೇಣು ಮಧ್ಯದಲಿ ಗುಣಭರಿತ ನೀನೆಂದು
ಮಣಿಪುತಿರ್ಪನಯ್ಯಾ ರಾಮನಾಥ ಎಂದಿದ್ದಾರೆ.
ಇದನ್ನೇ ಬಸವಣ್ಣನವರು,
ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ
ಸಕಲ ವಿಸ್ತಾರದ ರೂಹು ನೀನೇ ದೇವಾ,
ವಿಶ್ವತೋ ಬಾಹು ನೀನೇ ದೇವಾ
ವಿಶ್ವತೋ ಚಕ್ಷು ನೀನೇ ದೇವಾ,
ವಿಶ್ವತೋ ಮುಖ ನೀನೇ ದೇವಾ,
ವಿಶ್ವತೋಪಾದ ನೀನೇ ದೇವಾ, ಕೂಡಲ ಸಂಗಮದೇವಾ.

ಹೀಗೆ ಭಗವಂತನ ವಿರಾಟ್ ಸ್ವರೂಪವನ್ನು ವಿಸ್ತಾರವಾಗಿ ಎಳೆ ಎಳೆಯಾಗಿ ಬಿಡಿಸಿ ಹೇಳಿದ್ದಾರೆ. 'ಸತಿಪತಿಗಳೊಂದಾದ ಭಕ್ತಿ ಹಿತಮಪ್ಪುದು ಶಿವಂಗ' ಎಂದು ಹೇಳಿದ ದಾಸಿಮಯ್ಯನವರು ಒಂದು ಸಂಸಾರದ ಈ ಬಗ್ಗೆ ದಾಸಿಮಯ್ಯನ ವಚನವೂ

ಕೀಳು ಡೋಹರ ಕಕ್ಕ, ಕೀಳು ಉದ್ಭಟಯ್ಯ,
ಕೀಳಿಂಗಲ್ಲದೆ ಹಯನು ಕರೆಯದು
ಕಾಣ ರಾಮನಾಥ.

ಎಂಬ ತತ್ವ ಪ್ರತಿಪಾದಿಸಿದರೆ ಬಸವಣ್ಣನ ವಿಶ್ಲೇಷಣೆ ಈ ರೀತಿ ಇದೆ :

ಮೇಲಾಗಲೊಲ್ಲೆನು ಕೀಳಾಗಲಲ್ಲದೆ
ಕೀಳಿಂಗಲ್ಲದೆ ಹಯನು ಕರೆವುದೆ ?
ಮೇಲಾಗಿ ನರಕದೊಳೋಲಾಡಲಾರೆನು
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು
ಮಹಾದಾನಿ ಕೂಡಲ ಸಂಗಮದೇವ.

ದೇವರು ತನ್ನ ಭಕ್ತನನ್ನು ವಿವಿಧ ರೀತಿಯಲ್ಲಿ ಪರೀಕ್ಷಿಸಿ ನೋಡುತ್ತಾನೆ. ಅವುಗಳಲ್ಲಿ ಉತ್ತೀರ್ಣನಾದರೆ ಅವನನ್ನು ಕೈಹಿಡಿದು ಮೇಲೆತ್ತಿ ಕೊಳ್ಳುತ್ತಾನೆ. ಇಲ್ಲದಿದ್ದರೆ ಸುಮ್ಮನಾಗುತ್ತಾನೆ. ಆದ್ದರಿಂದ ದೇವರು ಒಡ್ಡುವ ಎಲ್ಲಾ ಪರೀಕ್ಷೆಗಳನ್ನು ಜಯಿಸುವ ತಾಳ್ಮೆ, ಕೆಚ್ಚು , ನಿಷ್ಠೆ, ಭಕ್ತನಿಗಿರಬೇಕು. ಇದನ್ನು ಕುರಿತಂತೆ ದಾಸಿಮಯ್ಯ ಬಸವಣ್ಣನವರ ವಚನಗಳನ್ನು ನೋಡೋಣ :

ಹರ ತನ್ನ ಭಕ್ತರ. ತಿರಿವಂತೆ ಮಾಡುವ
ಬರೆದು ನೋಡುವ ಸುವರ್ಣದ ಚಿನ್ನದಂತೆ
ಅರೆದು ನೋಡುವ ಚಂದನದಂತೆ
ಅರೆದು ನೋಡುವ ಕಬ್ಬಿನ ಕೋಲಿನಂತೆ

ಬೆದರದೆ ಬೆಚ್ಚದೆ ಇದ್ದಡೆ
ಕರವಿಡಿದೆತ್ತಿಕೊಂಬ ನಮ್ಮ ರಾಮನಾಥನು
.....
ಅರವನಯ್ಯ ಸಣ್ಣವಹನ್ನಕ್ಕ
ಒರೆವನಯ್ಯ ಬಣ್ಣಗಾಂಬನ್ನಕ್ಕ
ಅರೆದರೆ ಸಣ್ಣವಾಗಿ, ಬರೆದರೆ ಬಣ್ಣವಾದರೆ
ಕೂಡಲ ಸಂಗಮ ದೇವ ನೊಲಿದು ಸಲಹುವನು.

ಇದೇ ಬಸವಣ್ಣನವರು ತಮ್ಮ ಮತ್ತೊಂದು ವಚನದಲ್ಲಿ ಇದೇ ಅಭಿಪ್ರಾಯ ವ್ಯಕ್ತಿಪಡಿಸುತ್ತಾ ಬೆಚ್ಚದೆ ಬೆದರದೆ ತೊತ್ತುತನವ ಮಾಡಲು ತನ್ನ ನೀವ ಕೂಡಲ ಸಂಗಮದೇವ ಎಂದು ಹೇಳಿದ್ದಾನೆ. ಶರಣನಾದವನು ಅನ್ಯ ಸ್ತ್ರೀಯನ್ನು ಬಯಸಬಾರದು. ಬೇರೆಯವರ ಸಂಪತ್ತನ್ನ ದೋಚಲು ಹವಣಿಸಬಾರದು. ಹಾಗೆಯೇ ಒಂದೇ ದೈವನ್ನು ನಿಷ್ಟೆಯಿಂದ ಪೂಜಿಸಬೇಕು : ನಂಬಬೇಕು , ಕಂಡ ಕಂಡ ದೇವರನ್ನೆಲ್ಲಾ ಪೂಜಿಸುವ ಭಕ್ತನಿಗೂ, ಕಂಡ ಕಂಡ ಹೆಣ್ಣುಗಳನ್ನು ಬಯಸುವ ಕಾಮುಕನಿಗೂ ಯಾವ ವ್ಯತ್ಯಾಸವೂ ಇಲ್ಲ! ಎಂತಹ ನಿಷ್ಠುರ ಹೋಲಿಕೆ ರಾಮದಾಸನದು ? ನೋಡಿ.

ಪರವಧುವ ನೆರೆಯದೆ : ಪರಧನವ ತುಡುಕದೆ
ಪರದೈವದಿಚ್ಛೆವಡೆಯದೆ
ಗುರುಲಿಂಗ ಜಂಗಮಕ್ಕೆ ವರದಾಸನಾದಾತನೆ
ಧರೆ ಮೂರಕ್ಕೆ ಗುರುವಾಗಿಪ್ಪನೈ , ರಾಮನಾಥ.

ಇಂತಹ ಪ್ರಾಮಾಣಿಕ ಭಕ್ತ ಮಾತ್ರ ಇಡೀ ಜಗತ್ತಿಗೆ ( ಸಮಾಜಕ್ಕೆ) ಗುರುವಾಗುತ್ತಾನೆ. ಇದನ್ನೆ ಬಸವಣ್ಣನವರು ಇಂತಹ ಕಟ್ಟು - ನಿಟ್ಟಿನ ಬದುಕು ಸಾಗಿಸಲು ಛಲ, ಅಗತ್ಯವೆಂದು ಹೇಳಿದ್ದಾರೆ.

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗ ಜಂಗಮವೊಂದೆಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ಕೂಡಲ ಸಂಗಮದೇವ.

ನಿಜ, ಯಾವುದೇ ದಿಟ್ಟ ನಿರ್ಧಾರ ಮಾಡಲು, ಅದರಂತೆ ನಡೆಯಲು ಹಟ ಬೇಕು. ದುರ್ಬಲ ಮನಸ್ಸಿನವನು ತ್ರಿವಿಧ ಅರಿಯುವುದಕ್ಕಾಗಲಿ, ಹೆಣ್ಣು , ಹೊನ್ನು, ಮಣ್ಣು ನಿರಾಕರಿಸುವುದಕ್ಕಾಗಲಿ ಸಂಕಲ್ಪ ಶಕ್ತಿ ಬೇಕು : ಪರಮಾತ್ಮನು ಸರ್ವಶಕ್ತ, ಸರ್ವವ್ಯಾಪಿ, ಅವನಿಲ್ಲದ ಸ್ಥಳವಿಲ್ಲ, ಜಾಗವಿಲ್ಲ, ಹೀಗೆ ಅಣುರೇಣು, ತೃಣ ಕಾಷ್ಠಗಳಲ್ಲಿ , ಪರ್ವತಾದಿಗಳಲ್ಲಿ - ಹೀಗೆ ಎಲ್ಲದರಲ್ಲಯೂ ವ್ಯಾಪಿಸಿರುವವನು ಪರಮಾತ್ಮ ಎಂದು ದಾಸಿಮಯ್ಯನು

ಮಣಿಗಳ ಸೂತ್ರದಂತೆ ತ್ರಿನಯನ , ನೀನಿಪ್ಪೆಯಯ್ಯ ,
ಎಣಿಸುವಡೆ ತನು ನಿನ್ನ ಆತ್ಮನೊಬ್ಬನೆ
ಅಣು ರೇಣು ಮಧ್ಯದಲಿ ಗುಣಭರಿತ ನೀನೆಂದು
ಮಣಿಪುತಿರ್ಪನಯ್ಯಾ ರಾಮನಾಥ
ಎಂದಿದ್ದಾರೆ.

ಇದನ್ನೇ ಬಸವಣ್ಣನವರು,

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ
ಸಕಲ ವಿಸ್ತಾರದ ರೂಹು ನೀನೇ ದೇವಾ,
ವಿಶ್ವತೋ ಬಾಹು ನೀನೇ ದೇವಾ
ವಿಶ್ವತೋ ಚಕ್ಷು ನೀನೇ ದೇವಾ,
ವಿಶ್ವತೋ ಮುಖ ನೀನೇ ದೇವಾ,
ವಿಶ್ವತೋಪಾದ ನೀನೇ ದೇವಾ, ಕೂಡಲ ಸಂಗಮದೇವಾ.

ಹೀಗೆ ಭಗವಂತನ ವಿರಾಟ್ ಸ್ವರೂಪವನ್ನು ವಿಸ್ತಾರವಾಗಿ ಎಳೆ ಎಳೆಯಾಗಿ ಬಿಡಿಸಿ ಹೇಳಿದ್ದಾರೆ. 'ಸತಿಪತಿಗಳೊಂದಾದ ಭಕ್ತಿ ಹಿತಮಪುದು ಶಿವಂಗ' ಎಂದು ಹೇಳಿದ ದಾಸಿಮಯ್ಯನವರು ಒಂದು ಸಂಸಾರದ ಉದ್ದಾರಕ್ಕೆ, ವ್ಯಕ್ತಿಗಳ ಆತ್ಮೋದ್ದಾರಕ್ಕೆ ಅನುರೂಪ ದಾಂಪತ್ಯವಿದ್ದರೆ ಅದು ಅವನಿಗೆ ಪೂಜೆ ಮಾಡಿದಷ್ಟೇ ಪುಣ್ಯಕರವಾದುದು. ಆದರೆ ವಿರಸ ದಾಂಪತ್ಯ ಅರ್ಥಹೀನ ಬದುಕು, ಹೇಸಿಗೆಯ ಜೀವನ ಎಂಬುದು ದಸಿಮಯ್ಯನವರ ವಾದ ಉದಾ : ಗಂಡ ಭಕ್ತನಾಗಿ ಹೆಂಡತಿ ಭವಿಯಾದಡೆ

ಉಂಡ ಊಟವಿಬ್ಬರಿಗೂ ಸರಿಭಾಗ :
ಸತ್ತನಾಮ ತಂದು ಅಟ್ಟದ ಮೇಲೆ ಇಳುಹಿ
ಒಬ್ಬರೊಪ್ಪಚ್ಚಿ ಹಂಚಿಕೊಂಡು ತಿಂಬಂತೆ ಕಾಣಾ ರಾಮನಾಥ.

ಎಂಬ ಇದೇ ಮಾತನ್ನು ಬಸವಣ್ಣನವರು ಈ ಕೆಳಕಂಡ ವಚನದಲ್ಲಿ ಹೇಳಿದ್ದಾರೆ.

ಗಂಡ ಶಿವಲಿಂಗ ದೇವರ ಭಕ್ತ
ಹೆಂಡತಿ ಮಾರಿ ಮಸಣಿಯ ಭಕ್ತೆ :
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆ ಮಾಂಡ.
ಭಾಂಡ - ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಲೆಯ ಹೊರಗೆ ತೊಳೆದಂತೆ
ಕೂಡಲ ಸಂಗಮ ದೇವ.

ಶೂನ್ಯ ಸಿಂಹಾಸನಾಧಿಪತಿ : ಬೆಡಗಿನ ವಚನಗಳ ರಚನಕಾರ ಅಲ್ಲಮ ಪ್ರಭುವೂ ಸಹ ತನ್ನ ಹಿರಿಯ ವಚನಕಾರ ದಾಸಿಮಯ್ಯನಿಂದ ಹೇಗೆ ಪ್ರಭಾವಿತನಾಗಿದ್ದಾನೆ. ಎಂಬುದನ್ನು ತಿಳಿಯೋಣ.

ಲಿಂಗಾಧಾರಣೆ ಮಾಡಿಕೊಂಡಾಕ್ಷಣ ಎಲ್ಲರೂ ಶಿವಭಕ್ತರಾಗುವುದಿಲ್ಲ. ತನು - ಮನ ಧನಗಳು , ಗುರು - ಲಿಂಗ - ಜಂಗಮಕ್ಕೆ ಸಲ್ಲಬೇಕು. ಮಳೆಯ ಮೇಲೆ ಎಸೆದ ಕಲ್ಲು ಲೋಕೈಕನಾಥ ಶಿವನೂ ಅಲ್ಲ. ಆ ಬೇಲಿ ಶಿವಭಕ್ತನೂ ಅಲ್ಲ. ನೇಮವಿಲ್ಲದ ಭಕ್ತ ಬಿದಿರು ಮಳೆಯಂತೆ ; ಅವನ ಶರೀರದ ಮೇಲಿನ ಲಿಂಗ ಬರಿಗಲ್ಲು. ಇಷ್ಟಲಿಂಗ ಧರಿಸಿ ಸಂಕೋಲೆ ಗೊಳಪಡುವುದನ್ನು ದಾಸಿಮಯ್ಯ ವಿರೋಧಿಸುತ್ತಾನೆ.

ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ
ಕಟ್ಟಿದರೇನು ?
ಹಸಿವು ಹೋಹುದೆ ?
ಅಂಗದ ಮೇಲೆ ಲಿಂಗ ಸ್ವಾಯತವಾದರೇನು ?
ಶಿವಭಕ್ತ ನಾಗಬಲ್ಲನೆ ?
ಇಟ್ಟ ಕಲ್ಲು ಮಳೆಯ ಮೇಲೆ ಸಿಕ್ಕಿವಡೆ
ಆ ಕಲ್ಲು ಲಿಂಗವೆ ?
ಆ ಮಳೆ ಭಕ್ತನೆ । ಇಟ್ಟಾತ ಗುರುವೆ ?
ಇಂತಪ್ಪವರ ಕಂಡರೆ ನಾಚುವೆನಯ್ಯ ಗುಹೇಶ್ವರ

ಎಂದರೆ ಹೊಟ್ಟೆ ತುಂಬಿಸಿಕೊಳ್ಳಲು ಊಟದ ಬುತ್ತಿಯನ್ನು ಹೊಟ್ಟೆಯ ಮೇಲೆ ಕಟ್ಟಿಕೊಂಡರೆ ಹಸಿವು ತೀರುವುದಿಲ್ಲ. ಆಹಾರ ಜಠರ ಸೇರಬೇಕು. ಹಾಗೆಯೇ ಅಂಗದ ಲಿಂಗ - ಮನದ ಲಿಂಗವಾಗಬೇಕು. ಆಗ ಅವನು ಭಕ್ತ, ಅವನಿಂದ ಭಕ್ತಿ ಸಾಧ್ಯ. ಅಂತಹವನಿಗೆ ದೀಕ್ಷೆ ನೀಡಿದ್ದಕ್ಕೂ ಪ್ರಯೋಜನ. ಹಾಗಿಲ್ಲದ್ದಿದ್ದರೆ ಗುರು ಲಿಂಗ - ಜಂಗಮ ರನ್ನು ಕಂಡು ನಾಚುವನಂತೆ ಪ್ರಭುದೇವ !ತೀರ್ಥಮಾತ್ರೆಗಳಿಂದಾಗಲಿ ತೀರ್ಥಸ್ನಾನಗಳಿಂದಾಗಲಿ ದೇವರು ಒಲಿಯುವುದಿಲ್ಲ. ಮುಕ್ತಿ ಸಿಗುವುದಿಲ್ಲ. ಮನಸಾರೆ ದೇವರನ್ನು ಧ್ಯಾನಿಸಬೇಕು . ಜಂಬೂ ದ್ವೀಪವನ್ನೆಲ್ಲ ಸುತ್ತಿಬಂದ ನರಿ ಶಿವಧ್ಯಾನ ದಲ್ಲಿ ನಿರತವಾಗಿ ಮುಕ್ತಿ ಪಡೆಯ ಬಲ್ಲುದೆ? ಭೂ ಪ್ರದಕ್ಷಿಣೆಯನ್ನು ದಿಕ್ಕು - ದೆಸೆ ಇಲ್ಲದ, ತನ್ನವರೆಂಬುವವರು ಇಲ್ಲದ ಅನಾಥ, ಅಲೆಮಾರಿಯು ರೂಡಬಲ್ಲನು. ಅಂದ ಮಾತ್ರಕ್ಕೆ ಆತ ಭಕ್ತನಾಗ ಬಲ್ಲನೆ ? ಎಂಬುದು ದಾಸಿಮಯ್ಯನ ವಾದ.

ಜಂಬೂ ದ್ವೀಪವನೆಲ್ಲಾ ತಿರುಗಿದಡೇನು ?
ಜಂಬುಕ ಶಂಬುಧ್ಯಾನದಲ್ಲಿ ಸೈವೆರಗಪ್ಪುದೆ ?
ಕುಂಬಿನಿಯ ತಿರುಗಿ ಕೋಟಿತೀರ್ಥವ ಮಿಂದಡೇನು
ಕುಂಭಿನಿಯ ತಿರುಗಿದ ಡೊಂಬನಂತೆ ಕಾಣ ರಾಮನಾಥ

ಪ್ರಭುದೇವನೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಚಂಚಲವಾದ ಮನಸ್ಸನ್ನು ಚಿತ್ರದಲ್ಲಿ ಬರೆದ ಆಕೃತಿಯಂತೆ ಕಟ್ಟಿ ನಿಲ್ಲಿಸಿದಾಗ ಮಾತ್ರ ಗುಹೇಶ್ವರನೆಂಬ ಬೆಳಕನ್ನು ಕಾಣಲು ಸಾಧ್ಯ.

ಉದಾ: ಸುತ್ತಿ ಸುತ್ತಿ ಬಂದಡಿಲ್ಲ, ಲಕ್ಷಗಂಗೆ ಮಿಂದಡಿಲ್ಲ
ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ

ನಿತ್ಯ ನೇಮದಿಂದ ತನುವ ಮುಟ್ಟಿ ಕೊಂಡಡಿಲ್ಲ
ನಿಚ್ಚಕ್ಕೆ ನಿಚ್ಚ : ನೊರೆಯ ಮನವ
ಅಂದಂದಿಗೆ ಅತ್ತಲಿತ್ತ ಹರಿಷ ಮನವ
ಚಿತ್ರದಲ್ಲಿ ನಿಲ್ಲಿಸಬಲ್ಲಡೆ
ಬಚ್ಚ ಬರಿಯ ಬೆಳಗು ಗುಹೇಶ್ವರ ಲಿಂಗವು ಎಂದಿದ್ದಾರೆ.

ಸಮರಸದಿಂದ ಕೂಡಿದ ಸಂಸಾರ ಸ್ವರ್ಗ. ಅದೇ ಸಂಸಾರದಲ್ಲಿ ವಿರಸವಿದ್ದರದು ನರಕ. ಗಂಡ - ಹೆಂಡತಿ ಇಬ್ಬರೂ ಅನ್ಯೋನ್ಯವಾಗಿ ಬಾಳುವೆ ಮಾಡಿದರೆ ಅದು ಶಿವನಿಗೂ ಪ್ರಿಯ 'ಮನೆಗೆದ್ದು ಮಾರು ಗೆಲ್ಲು' - ಎಂಬ ಗಾದೆ ಮಾತು ಹೇಳುವುದು ಇದನ್ನೇ.

ದಾಸಿಮಯ್ಯ ಅದನ್ನು ಹೀಗೆ ಹೇಳಿದ್ದಾನೆ
ಸತಿ ಪತಿಗಳೊಂದಾಗದವರ ಭಕ್ತಿ ಹಿತವಾಗಿಪ್ಪುದು ಶಿವಂಗೆ
ಸತಿ ಪತಿಗಳೊಂದಾಗದವರ ಭಕ್ತಿ ಅಮೃತದೊಳು
ವಿಷವ ಬೆರೆಸಿದಂತೆ ಕಾಣಾ ರಾಮನಾಥಾ

ಸಂಸಾರ ಮಾಡುವದರಲ್ಲಿ ಮತ್ತು ಭಕ್ತಿಯಲ್ಲೂ ಗಂಡ - ಹೆಂಡತಿ ಒಂದೇ ಮನಸ್ಸಿನಿಂದ ಮಾಡಿದರೆ ಅದು ದೇವರಿಗೆ ತೃಪ್ತಿಯಾಗುತ್ತದೆ ಎಂದು ಅನ್ಯೋನ್ಯತೆಗೆ ಪರಮಾರ್ಥದ ಸ್ವರೂಪವನ್ನು ವಚನಕಾರರು ಕೊಟ್ಟಿದ್ದಾರೆ. ಪ್ರಭುದೇವರ ಈ ವಚನವೂ ಇದನ್ನೇ ಸಮರ್ಥಿಸುತ್ತದೆ.

ಮಳೆಯ ಮೇಲಣ ಕಲ್ಲು ಜಗದರೆಯನಾಗಬಲ್ಲುದೆ ?
ಮಳೆ ಶಿವಭಕ್ತ ನಾಗಬಲ್ಲುದೆ ?
ನಿಮ್ಮ ತನುಮನ ಧನವನರಿಯದಿರ್ದಡೆ
ಸದುಭಕ್ತರಹರೆ ರಾಮನಾಥ

----

ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ
ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರ
ಲಿಂಗಕ್ಕೆ ಅರ್ಪಿತವಾಯಿತು.
ಜಂಬೂ ದ್ವೀಪವನೆಲ್ಲಾ ತಿರುಗಿದಡೇನು ?
ಜಂಬುಕ ಶಂಬುಧ್ಯಾನದಲ್ಲಿ ಸ್ಥೈರ್ಯವೆರಗಪ್ಪುದೆ ?
ಕುಂಬಿನಿಯ ತಿರುಗಿ ಕೋಟಿತೀರ್ಥವ ಮಿಂದಡೇನು
ಕುಂಭಿನಿಯ ತಿರುಗಿದ ಡೊಂಬನಂತೆ ಕಾಣ ರಾಮನಾಥ

ಪ್ರಭುದೇವನೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಚಂಚಲವಾದ ಮನಸ್ಸನ್ನು ಚಿತ್ರದಲ್ಲಿ ಬರೆದ ಆಕೃತಿಯಂತೆ ಕಟ್ಟಿ ನಿಲ್ಲಿಸಿದಾಗ ಮಾತ್ರ ಗುಹೇಶ್ವರನೆಂಬ ಬೆಳಕನ್ನು ಕಾಣಲು ಸಾಧ್ಯ.

ಉದಾ:

ಸುತ್ತಿ ಸುತ್ತಿ ಬಂದಡಿಲ್ಲ, ಲಕ್ಷಗಂಗೆ ಮಿಂದಡಿಲ್ಲ
ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ
ನಿತ್ಯ ನೇಮದಿಂದ ತನುವ ಮುಟ್ಟಿ ಕೊಂಡಡಿಲ್ಲ
ನಿಚ್ಚಕ್ಕೆ ನಿಚ್ಚ : ನೂರೆಯ ಮನವ
ಅಂದಂದಿಗೆ ಅತ್ತಲಿತ್ತ ಹರಿಷ ಮನವ
ಚಿತ್ರದಲ್ಲಿ ನಿಲ್ಲಿಸಬಲ್ಲಡೆ
ಬಚ್ಚ ಬರಿಯ ಬೆಳಗು ಗುಹೇಶ್ವರ ಲಿಂಗವು ಎಂದಿದ್ದಾರೆ.

ಸಮರಸದಿಂದ ಕೂಡಿದ ಸಂಸಾರ ಸ್ವರ್ಗ. ಅದೇ ಸಂಸಾರದಲ್ಲಿ ವಿರಸವಿದ್ದರದು ನರಕ. ಗಂಡ - ಹೆಂಡತಿ ಇಬ್ಬರೂ ಅನ್ಯೋನ್ಯವಾಗಿ ಬಾಳುವೆ ಮಾಡಿದರೆ ಅದು ಶಿವನಿಗೂ ಪ್ರಿಯ 'ಮನೆಗೆದ್ದು ಮಾರು ಗೆಲ್ಲು' - ಎಂಬ ಗಾದೆ ಮಾತು ಹೇಳುವುದು ಇದನ್ನೇ.

ದಾಸಿಮಯ್ಯ ಅದನ್ನು ಹೀಗೆ ಹೇಳಿದ್ದಾನೆ
ಸತಿ ಪತಿಗಳೊಂದಾಗದವರ ಭಕ್ತಿ ಹಿತವಾಗಿಪ್ಪುದು ಶಿವಂಗೆ
ಸತಿ ಪತಿಗಳೊಂದಾಗದವರ ಭಕ್ತಿ ಅಮೃತದೊಳು
ವಿಷವ ಬೆರೆಸಿದಂತೆ ಕಾಣಾ ರಾಮನಾಥಾ

ಸಂಸಾರ ಮಾಡುವವದರಲ್ಲಿ ಮತ್ತು ಭಕ್ತಿಯಲ್ಲೂ ಗಂಡ - ಹೆಂಡತಿ ಒಂದೇ ಮನಸ್ಸಿನಿಂದ ಮಾಡಿದರೆ ಅದು ದೇವರಿಗೆ ತೃಪ್ತಿಯಾಗುತ್ತದೆ ಎಂದು ಅನ್ಯೋನ್ಯತೆಗೆ ಪರಮಾರ್ಥದ ಸ್ವರೂಪವನ್ನು ವಚನಕಾರರು ಕೊಟ್ಟದ್ದಾರೆ. ಪ್ರಭುದೇವರ ಈ ವಚನವೂ ಇದನ್ನೇ ಸಮರ್ಥಿಸುತ್ತದೆ.

ಮಳೆಯ ಮೇಲಣ ಕಲ್ಲು ಜಗದರೆಯನಾಗಬಲ್ಲುದೆ ?

ತನ್ನ ಸುತ್ತ ಮತ್ತಲಿನ ಚರಾಚರ ಜೀವಿಗಳಲ್ಲೂ, ವಸ್ತುಗಳಲ್ಲೂ ದೇವರನ್ನು ಕಂಡವನು ದಾಸಿಮಯ್ಯ. ಅದು ಕೆಲವು ಸಾರಿ ಮಾನವರಿಂದ ದೊರೆತರೂ ಅದರ ಹಿಂದೆ ದೇವರಿದ್ದಾನೆ. ಎಂಬುದು ಭಾವಿಸಿ. ಯಾರು ಏನೇ ಕೊಟ್ಟರೂ ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ ಎಂದವರು ದಾಸಿಮಯ್ಯ ಅಂತಹದೆ ವಚನ ಇಲ್ಲಿದೆ.

ನೀ ನೀಸನೀಯದೆ ಮಾನಿಸನೀವನೆ ?
ನೀ ನೀಸುವ ಕಾರಣ ಮಾನೀಸನೀವನು , ಆ
ಮಾನಿಸನ ಹೃದಯದೊಳು ಹೊಕ್ಕು
ನೀನೀಸುವ ಕಾರಣ
ನೀನೆ ಶರಣೆಂಬೆನಯ್ಯ ರಾಮನಾಥ

ಇದೇ ಅಭಿಪ್ರಾಯ ಅಲ್ಲಮ ಪ್ರಭುವಿನದು. ಅವರ ವಚನ ನೋಡೋಣ.

ನಾ ದೇವನಲ್ಲದೆ ನೀದೇವನೆ ?
ನೀ ದೇವನಾದರೆ ಎನ್ನನೇಕೆ ಸಲಹೆ ?
ಆರೈದು ಒಂದು ಕುಡಿಕೆ ಉದಕವನೆವೆವೆ :
ನಾ ದೇವ ಕಾಣಾ ಗುಹೇಶ್ವರ .

ಗುರುವಿನಿಂದ ದೀಕ್ಷೆ ಪಡೆಯುವುದಕ್ಕೆ, ಶಿಷ್ಯ ನಾಗುವುದಕ್ಕೂ ಯೋಗ್ಯತೆ ಇರಬೇಕು. ಹಾಗೆಯೇ ಗುರುವಿಗೂ ದೀಕ್ಷೆ ನೀಡುವ ಅರ್ಹತೆ ಇರಬೇಕು. ಹಾಗಿಲ್ಲದಿದ್ದರೆ ಗುರು - ಶಿಷ್ಯರಿಗೂ ಬೆಲೆಯಿಲ್ಲ. ಅದನ್ನು ಕುರಿತು ದಾಸಿಮಯ್ಯ :

ಹೊಲಬನರಿಯದ ಗುರುವು
ಸುಲಭನಲ್ಲದ ಶಿಷ್ಯ
ಕೆಲಬಲನ ನೋಡಿ ವಿಚಾರಿಸಿ ಮಾಡದುಪದೇಶ
ಅಂಧಕನ ಕೈಯ ಅಂಧಕ ಹಿಡಿದಂತೆ ಕಾಣಾ ರಾಮನಾಥ

ಎಂದು ಹೇಳಿದ್ದಾರೆ. ಅಂದರೆ ಕುರುಡನಿಗೆ ಮಾರ್ಗದರ್ಶನ ಮಾಡಲು ಮತ್ತೊಬ್ಬ ಕುರುಡನೆ ಹೊರಟಂತಾಗುತ್ತದೆ. ಇಂತಹ ಈಡು - ಜೋಡು ಗುರು - ಶಿಷ್ಯರಾದರೆ ಗತಿಯೇನು ? ಪ್ರಭುದೇವರು ತಮ್ಮ ವಚನದಲ್ಲಿ ಇದೇ ಅಭಿಪ್ರಾಯವನ್ನು ಮಂಡಿಸಿದ್ದಾನೆ.

ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯ,
ಉಪಚಾರದ ಲಿಂಗ, ಉಪಚಾರದ ಜಂಗಮ,
ಉಪಚಾರದ ಪಾದೋದಕ ಪ್ರಸಾರವ ಕೊಂಡು,
ಗುರುವಿಂಗೆ ಭವದ ಲೆಂಕನಾಗಿ,
ಅಂಧಕನ ಕೈಯನಂಧಕ ಹಿಡಿದಂತೆ
ಗುರುಶಿಷ್ಯ ರಿಬ್ಬರೂ ಹೊಲಬುಗೆಟ್ಟರು ಕಾಣಾ ಗುಹೇಶ್ವರಾ .

ಒರಟು ಮಾತಿಗೆ ಹೆಸರಾದ, ಅಷ್ಟೇ ಒರಟು ಭಾಷೆಯಲ್ಲಿ ಹೇಳುವ ಖಂಡಿತವಾದಿ ಅಂಬಿಗರ ಚೌಡಯ್ಯ. ದಾಸಿಮಯ್ಯನ ಪ್ರವಾವದಿಂದ ಇದೇ ಅಭಿಪ್ರಾಯ ಹೇಗೆ ಅವನಲ್ಲಿ ಅಭಿವ್ಯಕ್ತಿಯಾಗಿದೆ ಪರಿಶೀಲಿಸೋಣ.

ಘನವನರಿಯದ ಗುರು, ಸುಲಭವಲ್ಲದ ಶಿಷ್ಯ,
ಕೆಲಬಲನ ನೋಡದ ಉಪದೇಶ,
ಅಂಧಕ ಹೊಲನ ಹೊಕ್ಕಂತೆ ಕಾಣಾ ರಾಮನಾಥಾ

......

ಅರಿಯದ ಗುರು ಅರಿಯದ ಶಿಷ್ಯ
ಇವರಿಬ್ಬರಿಗೇನಪ್ಪುದೊ ?
ಕುರುಡು ಕುರುಡನ ಕೈಯ ಪಿಡಿದು ಪಥವ ನಡೆಯಬಲ್ಲದೆ ?
ತೊರೆಯಲದ್ದಿ ಹೋಹನ ಈ ಸಲರಿಯದವ
ತೆಗೆದಂತಾಯಿತ್ತೆಂದ ನಂಬಿಗ ಚೌಡಯ್ಯ.

ಹೀಗೆ ' ಮೂರ್ಖರ ಮೇಳ ' ವನ್ನು ಚೌಡಯ್ಯ ಲೇವಡಿ ಮಾಡಿದ್ದಾನೆ. ಸಾವ ಕೆಡುವ ಗಂಡನ ತಂದು ಒಲೆಯೊಳಗಿಕ್ಕು, ಸಾವಿಲ್ಲದ, ಚೆನ್ನ ಮಲ್ಲಿಕಾರ್ಜುನನಿಗೆ ಒಲಿದು ಅವನನ್ನರಸುತ್ತಾ ಉಡುತಡಿ ಯಿಂದ ಶ್ರೀ ಶೈಲಕ್ಕೆ ಬಂದ ಸ್ತ್ರೀವಾದಿ, ಚಿಂತಕಿ ಅಕ್ಕ ಮಹಾದೇವಿಯೂ ಸಹ ಹಿರಿಯ ವಚನಕಾರ ದಾಸಿಮಯ್ಯನ ಪ್ರಭಾವಕ್ಕೆ ಹೇಗೆ ಒಳಗಾಗಿದ್ದಾಳೆಂಬುದನ್ನು ತಿಳಿಯೋಣ.

ದಾಸಿಮಯ್ಯನ ವಚನ :

ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದ
ಶರೀರದೊಳಗೆ ಆತ್ಮನನಾರೊ ಕಾಣದಂತಿರಿಸಿದೆ
ನೀ ಬೆರೆಸುವ ಭೇದಕ್ಕೆ ಬೆರಗಾದಿನಯ್ಯಾ ರಾಮನಾಥ.

ಇದನ್ನೆ ಅಕ್ಕ ಈ ಕೆಳಕಂಡಂತೆ ಹೇಳಿದ್ದಾರೆ. ನೋಡಿ,

ಎನ್ನ ನಾನರಿಯದಂದು, ಮುನ್ನ ನೀನಿಲ್ಲದೆ ? ಹೇಳಯ್ಯ !
ಚಿನ್ನದೊಳಗಣ ಬಣ್ಣದಂತೆ ಎನ್ನೊಳಗಿರ್ದೆಯಯ್ಯ !
ಎನ್ನೊಳಗಿರ್ದು ಮೈದೋರದ ಭೇದವ
ನಿಮ್ಮಲ್ಲಿ ಕಂಡೆನು ಕಾಣಾ ಚೆನ್ನ ಮಲ್ಲಿಕಾರ್ಜುನ

ಇದೇ ಅಚ್ಚರಿ ಅಕ್ಕ ತನ್ನ ಇನ್ನೊಂದು ವಚನದಲ್ಲಿ ಹೇಳಿದ್ದಾರೆ. ಹೋಲಿಸಿ,

ಹಾಲು ತುಪ್ಪವ ನುಂಗಿ ಬೇರಾಗಬಲ್ಲುದೆ ?
ಸೂರ್ಯ ಕಾಂತದಗ್ನಿಯನಾರು ಭೇದಿಸಬಲ್ಲರು ?
ಅಪಾರ ಮಹಿಮೆ ಚೆನ್ನಮಲ್ಲಿಕಾರ್ಜುನನೆನ್ನೊಳಡಗಿಪ್ಪ ಪರಿಯ
ಬೇರಿಲ್ಲದೆ ಕಂಡು ಕಣ್ತೆರೆದೆನು.

'ಹರ ತನ್ನ ಭಕ್ತರ ತಿರಿವಂತೆ ಮಾಡುವ' ಎನ್ನುವ ವಚನಲ್ಲಿ ಭಕ್ತನಾದವನು 'ಬೆದರದೆ ಬೆಚ್ಚದೆ ಇರ್ದಡೆ ಕರಿ ವಿಡೆದೆತ್ತಿ ಕೊಂಬ' - ಎಂಬ ಮಾತು ಅಕ್ಕನ ಮೇಲೆ ಪ್ರಭಾವ ಬೀರಿ , ಆಕೆಯಿಂದ ಹೇಗೆ ನಿರೂಪಣೆಗೊಂಡಿದೆ ನೋಡೋಣ.

ವನಿತೆಯರ ಕೂಟಕ್ಕೆ ತೆರಿಪಿಲ್ಲದಾಯಿತ್ತು
ಜನನ - ಮರಣ - ಭಾದೆ ಹರಿಯಿತ್ತು
ನಿಮ್ಮ ಪಾದ ಸೇವೆಯಿಂದ ಕಾಣಾ ರಾಮನಾಥ

ಭಕ್ತನ ಮುಕ್ತಿ ಪಥದ ಹಾದಿಯನ್ನು ಮಹಾದೇವಿ ಅಕ್ಕ ಈ ರೀತಿ ಹೇಳಿದ್ದಾಳೆ.

[1] ತನು ಶುದ್ದವಾಯಿತ್ತು ಶಿವಭಕ್ತರೊಕ್ಕುದ ಕೊಂಡೆನ್ನ
ಮನ ಶುದ್ದವಾಯಿತ್ತು ಅಸಂಖ್ಯಾರ ನೆನೆದೆನ್ನ
ಕಂಗಳು ಶುದ್ದವಾಯಿತ್ತು ಸಕಲ ಗಣಂಗಳ ನೋಡಿಯೆನ್ನ.
ಶ್ರೋತ್ರ ಶುದ್ದವಾಯಿತ್ತು
ಅವರ ಕೀರ್ತಿಯ ಕೇಳಿಯೆನ್ನ.
ನಿಮ್ಮ ಪಾದಾರ್ಪಿತ ಪರಿಮಳವ ವಾಸಿಸೆಯೆನ್ನ.
ಜಿಹ್ವೆ ಶುದ್ದವಾಯಿತ್ತು ನಿಮ್ಮ ಶರಣರೊಕ್ಕುದ ಕೊಂಡೆನಾಗಿ
ಭಾವನೆಯೆನಗಿದು ಜೀವನವು ಕೇಳಾ, ಲಿಂಗ ತಂದೆ
ನೆಟ್ಟನೆ ನಿಮ್ಮ ಮನ ಮುಟ್ಟಿ ಪೂಜಿಸಿ
ಭವಗೆಟ್ಟೆ ನಾನು ಚೆನ್ನಮಲ್ಲಿಕಾರ್ಜುನ ! [1]

ಶಿವನು ಸರ್ವಾಂತರ್ಯಾಮಿ . ಈ ಜಗತ್ತಿನಲ್ಲಿ ಅವನಿಲ್ಲದ ತಾಣವಿಲ್ಲ. ಸಾವಿರ ಕೊಡಗಳಲ್ಲಿ ನೀರು ತುಂಬಿಟ್ಟರೂ, ಸೂರ್ಯ ಒಬ್ಬನೇ ಆದರೂ ಅಷ್ಟೂ ಕೊಡಗಳಲ್ಲಿ ಪ್ರತಿಬಿಂಬಿಸುವಂತೆ , ಶಿವನೊಬ್ಬನೆ ಆದರೂ ಸರ್ವಭೂತಗಳಲ್ಲಿ ಆತ ನೆಲೆಸಿ, ಕಂಗೊಳಿಸಿದ್ದಾನೆ. ಈ ವಿಚಾರವನ್ನು ಕುರಿತು ದಾಸಿಮಯ್ಯನವರು, ಇವರ ಪ್ರಭಾವದಿಂದ ಷಣ್ಮುಕ ಸ್ವಾಮಿಗಳ ವಚನವನ್ನು ಹೋಲಿಸಿ ನೋಡೋಣ.

ದಾಸಿಮಯ್ಯ :

ಘಟದೊಳಗೆ ತೋರುವ ಸೂರ್ಯನಂತೆ
ಸರ್ವರಲ್ಲಿ ಶಿವನ ಚೈತನ್ಯವಿಪ್ಪುದು
ಇದ್ದರೇನು?
ಸರ್ವರಿಗೆ ಸಾಧ್ಯವಿಲ್ಲ.
ಮುಟ್ಟಿ ಮುಟ್ಟದು ಅದ ಕೊಡುವರೆ
ಗುರುವಿನಿಂದಲ್ಲದಾಗದು ಕಾಣಾ ರಾಮನಾಥ.
ಹೀಗೆ ಸರ್ವ ವ್ಯಾಪ್ತಿ ಶಿವನನ್ನು ಕಾಣ ಬೇಕಾದರೆ ಗುರು ಕೃಪಿ ಬೇಕು.

ಷಣ್ಮುಖ ಸ್ವಾಮಿ :

ಕುಂಭ ಸಹಸ್ರ ಉದಕದೊಳಗೆ
ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ
ಮತ್ತೆ ಹಲವರುಂಟೆ ಅಯ್ಯ ?
ಸಕಲ ದೇಹದೊಳಗೆ ಸಂಭ್ರಮಿಸಿ ತುಂಬಿಪ್ಪ
ಪರವಸ್ತು ನೀನೊಬ್ಬನಲ್ಲದೆ
ಮತ್ತಾರನು ಕಾಣೆನಯ್ಯ ಅಖಂಡೇಶ್ವರಾ
ಎಂದಿದ್ದಾರೆ.

ಸರ್ವಜ್ಞ ನೆಂದರೆ ಎಲ್ಲವನ್ನು ತಿಳಿದಿರುವವನು , ಬಲ್ಲವನು ಎಂದರ್ಥ. ಆದರೆ ಸರ್ವಜ್ಞನು ತನ್ನ ಹೆಸರು. ಗರ್ವದ ಸಂಕೇತವಲ್ಲ. ಬದಲಾಗಿ ಎಲ್ಲ ರೊಳಗೊಂದೊಂದು ನುಡಿಕಲಿತು ವಿದ್ಯೆಯ ಪರ್ವತವೇ ತಾನಾದುದನ್ನು ವನಮ್ರತೆಯಿಂದ ತಾವೇ ಹೇಳಿಕೊಂಡಿದ್ದಾರೆ. ಆ ಬಲ್ಲವ ರಲ್ಲಿ ನಮ್ಮ ದಾಸಿಮಯ್ಯನು ಒಬ್ಬ ಎಂಬುದಕ್ಕೆ ಅವನ ವಚನಗಳ ಪ್ರಭಾವ ಸರ್ವಜ್ಞನ ತ್ರಿಪದಿಗಳ ಮೇಲಿರುವುದನ್ನು ಕಾಣಬಹುದು. ಅಂತಹ ಪ್ರಭಾವದ ಪಕ್ಷಿನೋಟ ಇಂತಿದೆ.

ದಾಸಿಮಯ್ಯ:-

ನೀನೀಸನೀಯದೆ ಮಾನಿಸ ನೀವನೆ ?
ನೀನೀಸುವ ಕಾರಣ ಮಾನೀಸನೀವನು , ಆ
ಮಾನಿಸವ ಹೃದಯದೊಳು ಹೊಕ್ಕು
ನೀನಿಸುವ ಕಾರಣ
ನೀನೆ ಶರಣೆಂಬನಯ್ಯ ರಾಮನಾಥ

.......

ಮಾನಿಸನಿಲ್ಲದೆ ನೀ ನೀ ಶನೆಂತಾದೆ
ನೀ ನೀ ಶ ನೀ ಶ ನೆ ನ ಬೇಡ ಲೋಕಕ್ಕೆ
ಮಾನೀಸನೀಶ ಸರ್ವಜ್ಞ |

ದಾಸಿಮಯ್ಯನಿಗೆ ಸ್ವತ: ಮನುಷ್ಯನೆ ನೀಡಿದರೂ ಅದು ದೈವ ಪ್ರೇರಣೆ. ಅದಕ್ಕೆ ಅವನ ನಿಷ್ಠೆ ದೇವರಿಗೆ ಹೊರತು ಮಾನವನಿಗಲ್ಲ. ಆದರೆ ಸರ್ವಜ್ಞನ ದೃಷ್ಟಿಯಲ್ಲಿ ದೇವರನ್ನು ಕಾಣವವನು, ಪೂಜಿಸಿ, ಗೌರವ ತೋರುವವನು ಮನುಷ್ಯ. ಆದ್ದರಿಂದ ಸರ್ವಜ್ಞನ ದೃಷ್ಠಿಯಲ್ಲಿ ದೇವರಿಗಿಂತ ಮಾನವ ದೊಡ್ಡವನು ಎಂತಹ ಉದಾತ್ತ ಚಿಂತನೆ ಸರ್ವಜ್ಞನದು !

"ಎಣ್ಣೆ ಬಂದಾಗ ಕಣ್ಣು ಮುಚ್ಚಿ ಕೊಂಡರು"- ಎಂಬ ಗಾದೆ ಮಾತಿದೆ. ಜೀವನದ ಬಹುಪಾಲು ಸಮಯವನ್ನೆಲ್ಲಾ ಜಪ -ತಪದಲ್ಲಿ ಶಿವಧ್ಯಾನದಲ್ಲಿ ಕಳೆದು ಪುಣ್ಯ ಸಂಪಾದಿಸಿದರೂ ಸಾಯುವ ಗಳಿಗೆಯಲ್ಲಿ ಶಿವನನ್ನು ಅರ್ಥಾತ್ ಉಪಕಾರ ಮಾಡಿದವರನ್ನು ಮರೆತರೆ ಜೀವನ ವ್ಯರ್ಥ. ಅದನ್ನು ವಿವರಿಸುವ ವಚನ ಇಂತಿದೆ.

ದಾಸಿಮಯ್ಯ :-

ಅಡವಿಯಾರಣ್ಯದಲಿ ಮಡಿತನಕ ತಪವಿದ್ದು
ಮಡಿದಾಗ ಮೃಡನೆ ಮರೆದಡೆ ತುಂಬಿದ (ಸಕ್ಕರೆಯ)
ಮಡುವಿನೊಳಗೊಕ್ಕಂತೆ ರಾಮನಾಥ.

.......

ಅಡವಿಯಲಿ ತಪದಲಿ ದೃಢತನದೊಳಿದ್ದರೂ
ನುಡಿಯಲಿ ಶಿವನ ಮರದಡೆ ಗುಡವಿಲ್ಲ
ದಡಿಗೆಯುಂಡಂತೆ ಸರ್ವಜ್ಞ

ಶ್ರೇಷ್ಠ ಭಕ್ತರಾದ ಶರಣರ ಸೇವೆ ಮಾಡಿದರೆ ಸಾಕು, ಶಿವನ ಪೂಜೆ ಮಾಡಿದಷ್ಟೆ ಪುಣ್ಯ, ಸಂಪಾದನೆ ಅಂತಹ ಭಕ್ತರ ಮನೆಯ ಆಳಾಗಿ ಕಾವಲಿನ ನಾಯಾಗಿ, ಆ ಭಕ್ತರ ಮನೆಗೆ ರಕ್ಷಣೆಯ ಬೇಲಿಯಾಗಿಯಾದರೂ ಇರುವ ಇಚ್ಚೆ ದಾಸಿಮಯ್ಯನವರದು.

ಎತ್ತೆಪ್ಪ ಶರಣಂಗೆ, ತೊತ್ತಪ್ಪ ಶರಣಂಗೆ
ಭೃುತನಾಗಿ ಸದ್ಭಕ್ತರ ಮನೆಯ ಬಾಗಿಲ
ಕಾಯ್ದಿಪ್ಪ ಸೊಣಗನಪ್ಪೆ
ಕರ್ತಾರ ನಿನಗೆ ಹೊಡೆವಡುವ ಭಕ್ತರ ಮನೆಯ
ಹಿತ್ತಿಲ ಬೇಲಿಯಾಗಿಪ್ಪೆ ನಯ್ಯ ರಾಮನಾಥ
ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ
ಮತ್ತೆ ಪಾದದ ಕೆರವಾಗಿ ಗುರುವಿನ
ಹತ್ತಲಿರು ಎಂದ ಸರ್ವಜ್ಞ.

ಹಾಗೇಯೆ ಗುರುವಿಗೆ ಸೇವಕನಾಗಿ, ಮನೆಯ ಹಿಂದಿನ ಜಾಗದ ಗಿಡವಾಗಿ, ಕಡೆಗೆ ಗುರುವು ಮೆಟ್ಟುವ ಪಾದರಕ್ಷೆಯಾಗಿ ಯಾದರೂ ಇರುವ ಹಂಬಲ ಸರ್ವಜ್ಞನದು.

ರೋಗಿಗೆ ಅಪಥ್ಯವು ರುಚಿಸುವಂತೆ ಪಥ್ಯ ರುಚಿಸುವುದಿಲ್ಲ. ಅಂತೆಯೆ ದುಷ್ಟರಿಗೆ ನೀತಿ ಮಾತುಗಳು ನಿಷ್ಪ್ರಯೋಜಕ, ದೇವರ ಸನ್ನಿಧಿಗೆ ಅಂತಹವರು ಬಲು ದೂರ, ದೂರ!

ದಾಸಿಮಯ್ಯ :-

ಜ್ವರ ಬಡಿದ ಬಾಯಿಗೆ ನೊರೆವಾಲು ಉರಿಸುವುದೆ
ನರಕದಲಿ ಬೀಳ್ದ ಮನುಜರಿಗೆ ಶಿವಭಕ್ತ
ಕರಗಹಿ ಕಾಣ ರಾಮನಾಥ

ಸರ್ವಜ್ಞ :-

ಜ್ವರವಾದ ಮನುಜಂಗೆ । ನೊರೆವಾಲು ಸಿಹಿಯಕ್ಕು
ನರಕದಲಿ ಬೀಳ್ವ ಅಧಮಂಗೆ । ಶಿವಭಕ್ತಿ
ಹಿರಿಯ ಕಹಿಯಕ್ಕು ಸರ್ವಜ್ಞ

ಸರ್ವಶಕ್ತನಾದ ಭಗವಂತ ಇಲ್ಲದ ಜಾಗವಿಲ್ಲ. ಅವನನ್ನು ವಂಚಿಸುವುದು ಸಾಧ್ಯವಿಲ್ಲ. ಅವನ ಅಣತಿಯಿಲ್ಲದೆ ತೃಣವೂ ಅಲುಗಾಡುವುದಿಲ್ಲ. ಇದರ ಅರಿವು ದಾಸಿಮಯ್ಯನಿಗೆ ಇದೆ. ಅದಕ್ಕೆ,

ನಾನೊಂದು ಸುರಿಗೆಯನೇನೆಂದು ಹಿಡಿವೆನು ?
ಏನಕಿತ್ತೇನ ನಿರಿವೆನು ? ಜಗವೆಲ್ಲ
ನೀನಾಗಿ ಇಪ್ಪೆ ರಾಮನಾಥ.

ಸರ್ವಜ್ಞ :-

ಆನೊಂದು ಕೈದುವನು । ಏನೆಂದು ಹಿಡಿವೆನು
ಏನ ಬಿಟ್ಟೇನನಿರುವೆನು । ಜಗವೆಲ್ಲ
ತಾನಾದ ಬಳಿಕ ಸರ್ವಜ್ಞ

ತಿಳುವಳಿಕೆ ಇಲ್ಲದವನು ಇನ್ನೊಬ್ಬನಿಗೆ ಏನು ತಿಳಿಸಬಲ್ಲನು ? ಅಂತಹವನನ್ನು ನಂಬಿದ ಶಿಷ್ಯನ ಉದ್ಧಾರವಾಗುವುದಾದರೂ ಹೇಗೆ ಸಾಧ್ಯ ? ನೀರಲ್ಲಿ ಮುಳುಗುತ್ತಿದ್ದವನನ್ನು ಈಜು ಬಾರದವನು ಉಳಿಸಬಲ್ಲನೆ ? ಅವನೂ ಸಾಯುತ್ತಾನೆ, ಅಷ್ಟೆ.
ದಾಸಿಮಯ್ಯನ ವಚನ ಸರ್ವಜ್ಞನಲ್ಲಿ ತ್ರಿಪದಿಯಾಗಿ ಹೇಗೆ ಮಾರ್ಪಾಡು ಹೊಂದಿದೆ ಎಂಬುದನ್ನು ಇಲ್ಲಿ ಕಾಣಬಹುದು.

ಹೊಲಬನರಿಯದ ಗುರು । ತಿಳಿಯಲರಿಯದ ಶಿಷ್ಯ
ನೆಲೆಯನಾರಯ್ಯ ದುಪದೇಶ । ಅಂಧಕನು
ಕೊಳವ ಹೊಕ್ಕಂತೆ ಸರ್ವಜ್ಞ

ಕಣ್ಣು ಕಾಣದ ಕುರುಡ ನೆಲದ ಮೇಲೆ ನಡೆದಾಡುವುದೆ ಕಷ್ಟ, ಅಂತಹ ನೀರಿನಲ್ಲಿ ಬಿದ್ದರೆ ಬದುಕಬಲ್ಲನೆ ? ಸಾಧ್ಯವಿಲ್ಲ. ಹೀಗೆ ತಿಳುವಳಿಕೆ ಇಲ್ಲದವನ ಉಪದೇಶ ಎಂದಿದ್ದಾರೆ ಸರ್ವಜ್ಞ.

ಸರ್ವಜ್ಞನ ತ್ರಿಪದಿಗಳಿಗೂ ದಾಸಿಮಯ್ಯನ ವಚನಗಳಿಗೂ ಇರುವ ಜನ್ಯ- ಜನಕ ಸಂಬಂಧವನ್ನು ದೃಷ್ಟಿಯಲ್ಲಿಟ್ಟುಕೊಂಡ ಡಾ॥ ಎಂ. ಚಿದಾನಂದ ಮೂರ್ತಿಯವರು ವಚನಗಳ ಉಗಮಕ್ಕೆ

( ಬಾದಾಮಿ ಶಾಸನದ ಕಾಲದಿಂದಲೂ ಜನ ಬಳಕೆಯಲ್ಲಿರುವ ) ತ್ರಿಪದಿಗಳೇ ಮೂಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಆದರೆ ಈ ಬಗ್ಗೆ ಆಳವಾಗಿ ಸಂಶೋಧನೆ ನಡೆಸಿರುವ ಡಾ॥ ಎಲ್ . ಬಸವರಾಜುರವರು ಡಾ॥ ಚಿ.ಮೂರ್ತಿಯವರ ಈ ಅಭಿಪ್ರಾಯವನ್ನು ಅಲ್ಲಗೆಳೆದಿದ್ದಾರೆ.

ಮೇಲೆ ನೋಡಿದ ಎಲ್ಲ ಉದಾಹರಣೆಗಳಿಂದ ದಾಸಿಮಯ್ಯನ ವಚನಗಳು ನಂತರ ಬಂದ ವಚನಕಾರರ ಮೇಲೆ ಪ್ರಭಾವ ಬೀರಿವೆ ಎಂಬುದನ್ನು ತಿಳಿಯಬಹುದು. ಈ ವಿಚಾರವಾಗಿ ಬರೆಯುತ್ತಾ ಶ್ರೀ. ಜ. ಚ. ನಿ ಅವರು ಸೂತ್ರಪ್ರಾಯವಾದ ದಾಸಿಮಯ್ಯನ ಒಂದು ವಚನಾಭಿಪ್ರಾಯ ವನ್ನೇ ನಾಲ್ಕಾರು ವಚನಗಳ ಮೂಲಕ ಬಸವಣ್ಣ ಎತ್ತಿ ಹಿಡಿದಿದ್ದಾನೆ. ವಿವರಿಸಿದ್ದಾನೆ. ಅವೇ ಉಪಮೆಗಳನ್ನು ಧಾರಾಳವಾಗಿ ಉಪಯೋಗಿಸಿದ್ದಾನೆ. ದೇವರ ದಾಸಿಮಯ್ಯನು ಹನ್ನೊಂದನೆ ಶತಮಾನದಲ್ಲಿ ಕೈಗೊಂಡ ಸಾಮಾಜಿಕ ಕಾರ್ಯಗಳು , ತಾತ್ವಿಕ ವಿಚಾರ, ಹನ್ನೆರಡನೆ ಶತಮಾನದ ಬಸವಣ್ಣನ ವಚನದಲ್ಲಿ ಚೆನ್ನಾಗಿ ಪ್ರತಿ ಬಿಂಬಿತವಾಗಿದೆ. ಬಳ್ಳಿಯಂತೆ ವಿಸ್ತಾರ ವಾಗಿ ಬೆಳೆದು ಹಬ್ಬಿವೆ. ದಾಸಿಮಯ್ಯನ ವಚನಗಳ ಪ್ರಭಾವ ಬಸವಣ್ಣನಿಂದ ಸರ್ವಜ್ಞನವರೆವಿಗೂ ಇರುವ ಎಲ್ಲ ಕವಿಗಳ ಗ್ರಂಥಕಾರರ ಮೇಲೆ ಒಂದಿಲ್ಲ ಒಂದು ರೀತಿಯಲ್ಲಿ ಬಿದ್ದಿವೆ - ಎಂಬ ಹೇಳಿಕೆಯೆ ದಾಸಿಮಯ್ಯನ ಸಾಹಿತ್ಯದ ಶ್ರೇಷ್ಠತೆಯನ್ನು, ಆತನ ವೈಚಾರಿಕತೆಯನ್ನು ಸ್ಪಷ್ಟಪಡಿಸುತ್ತದೆ.

**ಅಡಿ ಟಿಪ್ಪಣಿ :**

1. **ಡಾ ॥ ಎಲ್. ಬಸವರಾಜು , ಅಕ್ಕನ ವಚನಗಳು , ಪುಟ - 18**

# ಅಧ್ಯಾಯ - 3

## 'ಅಖಿಲ ಭಾರತ ( ಪ್ಯಾನ್ ಇಂಡಿಯನ್ ) ವ್ಯಾಪ್ತಿಯ ಭಕ್ತಿಪಂಥ ಮತ್ತು ಕನ್ನಡ ಸಂಸ್ಕೃತಿಯ ಭಕ್ತಿ ಪಂಥವೆನ್ನಬಹುದಾದ 'ದಾಸನಕುಲ'ದ ವಿಚಾರದ ಮಂಡನೆ. ಭಕ್ತಿ ಮತ್ತು ಪುರೋಹಿತಶಾಹಿಗಳ ನಡುವಣ ವ್ಯತ್ಯಾಸಗಳ ಪರಿಶೀಲನೆ'.

[1] ಕರ್ನಾಟಕದ ಧಾರ್ಮಿಕ ಸಾಂಸ್ಕೃತಿಕ ಇತಿಹಾಸದಲ್ಲಿ ಭಕ್ತಿ ಪಂಥದ ಪ್ರತಿಪಾದಕರ ಸ್ಥಾನ ವಿಶಿಷ್ಟವಾದುದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ನಿರಂತರವಾಗಿ ಹರಿದು ಬಂದ ಜೀವನ ಮೌಲ್ಯಗಳನ್ನು ವಚನಕಾರರಂತೆ ಜನಸಾಮಾನ್ಯರಿಗೆ ಅವರದೇ ಆದ ಭಾಷೆಯಲ್ಲಿ ಮುಟ್ಟಿಸಿ, ರಂಜನೆಯ ಮೂಲಕ ಅವರ ಮನೋವಿಕಾಸವನ್ನು ಯಶಸ್ವಿಯಾಗಿ ಮಾಡಿದವರು ತಮ್ಮ ಭಕ್ತಿ ಪಂಥದ ಮೂಲಕ ಹರಿದಾಸರು ಅಥವಾ ದಾಸನ ಕುಲದವರು. [1]

ವಚನಗಳನ್ನು ಇಂಪಾಗಿ ಹಾಡುವ ಪರಂಪರೆ ಇರುವಂತೆಯೇ ದಾಸರ ಕೀರ್ತನೆಗಳನ್ನು ಶುಶ್ರಾವ್ಯವಾಗಿ ಹಾಡುವ ದಂಡೇ ಇದೆ. ಹೀಗೆ ಭಕ್ತಿ ಪಂಥದವರು ಶಿವ ಶರಣರಂತೆ ಭಗವನ್ನಾಮ ಸ್ಮರಣೆ ಮಾಡುತ್ತಾ, ಕೇಳುಗರನ್ನು ಭಕ್ತಿ ಸಾಗರದಲ್ಲಿ ಮುಳುಗಿಸಿ ಭವ ಸಾಗರ ದಾಟಿಸುವ ಪದ್ಧತಿ ಬೆಳೆಸಿ ಆ ಮೂಲಕ ಕನ್ನಡ ಸಂಸ್ಕೃತಿಯನ್ನು ಗಟ್ಟಿಗೊಳಿಸಿ ಬೆಳೆಸಿದ ಮಹಾನುಭಾವರು.

ಹರಿ, ಮಾಧವ, ಕೇಶವ, ಮುಕುಂದ, ಗೋಪಾಲ, ವಿಜಯ, ಪುರಂದರ ವಿಠಲ, ಜಗನ್ನಾಥ, - ಹೀಗೆ ಬಗೆ ಬಗೆಯ ಹೆಸರುಗಳಿಂದ ತಮ್ಮ ಇಷ್ಟ ದೈವವನ್ನು ನೆನೆದು, ಭಕ್ತಿ ಪಂಥ ಬೆಳೆಸಿ, ಇಹಲೋಕದ ಭೋಗ - ಭಾಗ್ಯಗಳನ್ನು ತ್ಯಜಿಸಿ ನಿರ್ಮಲ ಭಕ್ತಿಯಿಂದ ದೇವರ ದಾಸನಾಗಿ ತಾಳತಂಬೂರಿ ಹಿಡಿದು ಭಗವಂತನ ಲೀಲಾ ವಿನೋದಗಳನ್ನು ಹಾಡಿ ರಂಜಿಸುತ್ತಾ, ಅವರಲ್ಲೂ ಭಕ್ತಿಯ ಬೀಜ ಬಿತ್ತುವ ಕಾಯಕವನ್ನು ನಿರಂತರವಾಗಿ ಮಾಡುತ್ತಾ, ಊರೂರು ಸುತ್ತಿ 'ದಾಸನಕುಲ'ವನ್ನು ಬೆಳೆಸಿದ ಕೀರ್ತಿ ಭಕ್ಕಿಪಂಥ ದವರಿಗೆ ಸಲ್ಲುತ್ತದೆ.

ಹಾಗೆ ನೋಡಿದರೆ ಭಕ್ತಿಯ ಕಲ್ಪನೆಯೇ ಅತ್ಯಂತ ಪ್ರಾಚೀನವಾದುದು. ಸರ್ವಜ್ಞನ ಸಮಕಾಲೀನನಾದ ತಮಿಳುನಾಡಿನ ನಾಯನ್ಮಾರರು, ಆಳ್ವಾರರು, ತಿರುವಳ್ಳುವರ್, ಉತ್ತರ ಭಾರತದ ಮೀರಾಬಾಯಿ, ಕೃಷ್ಣ ಪ್ರೇಮಿ ರಾಧೆ, ತೆಲುಗಿನ ಅನ್ನಮಯ್ಯ, ತಮ್ಮ ದೋಹಾಗಳಿಂದ ಹೆಸರುವಾಸಿಯಾದ ಕಬೀರ ದಾಸರು, ತುಳಸಿದಾಸ, ಗುರುನಾನಕ್ - ಹೀಗೆ ಬೇರೆ ಬೇರೆ ರಾಜ್ಯಗಳಲ್ಲಿ ಅಖಿಲ ಭಾರತ ಮಟ್ಟದಲ್ಲಿ ಹೆಸರು ವಾಸಿಯಾದ ಅನ್ಯ ದಾಸನಕುಲದವರೊಂದಿಗೆ, ನಮ್ಮ ನಾಡಿನವರೇ ಆದ ನರಹರಿ ತೀರ್ಥರು, ಶ್ರೀ ಪಾದರಾಯರು, ವ್ಯಾಸರಾಯರು, ಕನಕದಾಸ, ಪುರಂದರದಾಸ, ಗೋಪಾಲದಾಸ, ವಿಜಯದಾಸ, - ಮತ್ತಿತರರು ತಮ್ಮ ಭಕ್ತಿ ಪಂಥದ ಮೂಲಕ 'ದಾಸನ ಕುಲ' ವನ್ನು ಪ್ರತಿನಿಧಿಸಿದರು. ಭಕ್ತಿ ಪಂಥದ ಸಾಹಿತ್ಯ ಕನ್ನಡ ನಾಡಿನಲ್ಲಿ ಹನ್ನೆರಡನೇ ಶತಮಾನದಿಂದಲೇ ಆರಂಭವಾಯಿತು ಎನ್ನಬಹುದು.

ಮಾತೃಭಾಷೆಯಾದ ಕನ್ನಡದಲ್ಲಿ ಭಕ್ತಿಯ ಅನೇಕ ಮುಖಗಳನ್ನು ಚಿತ್ರಿಸುವ ಕಾರ್ಯ ಶಿವ ಶರಣರಿಂಧಾಯಿತು. ಎರಡು ಶತಮಾನಗಳ ಕಾಲ ಉಚ್ಛ್ರಾಯ ಸ್ಥಿತಿಯಲ್ಲಿದ್ದ ವಿಜಯ ನಗರದ ಅರಸರು ಸ್ವತಃ ವೈದಿಕ ಮತಾನುಯಾಯಿಗಳಾಗಿದ್ದುದರಿಂದ ದ್ವೈತ ಸಂಪ್ರದಾಯವನ್ನು ಮುಂದುವರಿಸಿದರು. ಮುಂದೆ ಇದು ವ್ಯಾಸ ಕೂಟ – ದಾಸ ಕೂಟ ಎಂಬ ಎರಡು ಸಂಪ್ರದಾಯಗಳಾಗಿ ಬೆಳೆಯಿತು.

ತತ್ವ ಪ್ರಧಾನ, ಸಂಸ್ಕೃತ ಭೂಯಿಷ್ಠ, ವಿದ್ವತ್ ಸಂಪ್ರದಾಯ ವ್ಯಾಸಕೂಟವಾದರೆ, ಭಕ್ತಿ ಪ್ರಚಾರದಲ್ಲಿ ಅಧಿಕ ಆಸಕ್ತಿ, ಸಮಾಜ ಸುಧಾರಣೆ ದೃಷ್ಟಿ, ಸಾಮಾನ್ಯರ ಸಂಪ್ರದಾಯ, ಮಾತೃ ಭಾಷೆಯಾದ ಕನ್ನಡದಲ್ಲಿ ಅಭಿವ್ಯಕ್ತಿ – ಇವು ದಾಸಕೂಟದ ಲಕ್ಷಣ.

ಮಾನವ ಜೀವನಕ್ಕೆ ಆಧಾರವಾದದ್ದು ಧರ್ಮವೆಂದು, ಮನುಷ್ಯನ ಪ್ರಗತಿಗೆ ಧರ್ಮವೇ ಮೂಲವೆಂದು ಹರಿದಾಸರು ನಂಬಿದ್ದರಿಂದ ಇವರ ಧಾರ್ಮಿಕ ಬೋಧನೆಗಳಲ್ಲಿ ಗಾಢವಾದ ಜೀವನ ನಿಷ್ಠೆಯನ್ನು ಕಾಣಬಹುದು.

'ದಾಸಕುಲ'ದವರು ಸರಳವಾದ ಕೀರ್ತನೆಗಳಲ್ಲಿ ತಮ್ಮ ಅನುಭವ ವ್ಯಕ್ತ ಪಡಿಸಿದ್ದರೆ, ಕೆಲವರು ಗ್ರಂಥ ರಚಿಸುವಂತಹ ಪ್ರತಿಭಾವಂತರು. ಆದರೂ ಮುಖ್ಯವಾಗಿ ಇವರ ಮನಸ್ಸು ಜನತೆಯ ಕಡೆಗೆ ತಿರುಗಿದ್ದರಿಂದ ಲೋಕಾನುಭವವನ್ನೆಲ್ಲಾ ಜನರಿಗಾಗಿ, ಜನರ ಭಾಷೆಯಲ್ಲಿ ಧಾರೆ ಎರೆದರು. ಅನುಭವ ಪಾಂಡಿತ್ಯದ ಹಿನ್ನಲೆಯಿಂದಾಗಿ ಆಡು ಭಾಷೆಯೂ ಜೀವಂತಿಕೆ ಪಡೆದು ಹಾಡಿದ್ದೆಲ್ಲಾ ಸಾಹಿತ್ಯವಾಯಿತು; ಕಾವ್ಯವಾಯಿತು ; ಕೇಳುಗರನ್ನು ಸೆರೆಹಿಡಿಯಿತು; ಕ್ರಾಂತಿಯನ್ನೇ ರೂಪಿಸಿತು.

ಅನಂತ ಗುಣ ಪೂರ್ಣನಾದ ಭಗವಂತನಿಂದ ತಾನು ಭಿನ್ನ ಎಂದು ಮಾನವನು ಬಗೆದಾಗಲೆ 'ಭಕ್ತ', 'ಭಕ್ತಿ' ಎಂಬ ಪದಗಳು ರೂಢಿಗೆ ಬಂದಿರಬೇಕು. ಭಕ್ತ ಎಂದರೆ ವಿಭಕ್ತನಾದವನು ಎಂದರ್ಥ. ತಾನು ಬೇರೆ, ಪರಮಾತ್ಮನು ಬೇರೆ ಎಂಬ ದ್ವೈತ ಭಾವನೆಯೊಂದಿಗೆ ತನ್ನ ಉದ್ಧಾರಕ್ಕಾಗಿ ಭಗವಂತನಲ್ಲಿ ತನ್ನನ್ನೇ ತಾನು ಅರ್ಪಿಸಿಕೊಳ್ಳುವುದೇ ಭಕ್ತಿಯ ಲಕ್ಷಣ.

'ಅಮೃತಮಯವಾದ ಉತ್ಕಟ ಪ್ರೇಮವೆ ಭಕ್ತಿ' – ಎಂದು ನಾರದ ಭಕ್ತಿ ಸೂತ್ರದಲ್ಲಿ ಹೇಳಿದೆ. 'ಈಶ್ವರನಲ್ಲಿ ನಾವು ಕೋರುವ ಪರಮಾನುರಕ್ತಿಯ ಭಕ್ತಿ' – ಎಂಬ ಉಕ್ತಿ ಶಾಂಡಿಲ್ಯ ಸೂತ್ರದಲ್ಲಿದೆ. 'ಭಜನಂ ಭಕ್ತಿಃ', 'ಭಜಂತೆ ಅನಯಾ ಇತಿ ಭಕ್ತಿಃ' – ಎಂದು ಭಕ್ತಿಯ ಬಗೆ ಬಗೆಯ ವ್ಯುತ್ಪತ್ತಿಯಲ್ಲಿ ಹೇಳಲಾಗಿದೆ. ಮುಖ್ಯವಾಗಿ ಭಗವಂತನಲ್ಲಿ ಮನಸ್ಸನ್ನು ಸ್ವೀಕರಿಸುವುದೆ ಭಕ್ತಿ – ಎಂದು ನಾರದ ಭಕ್ತಿ ಸೂತ್ರದಲ್ಲಿ ಉಲ್ಲೇಖಿಸಿದೆ.

ಭಾಗವತದಲ್ಲಿ ವಿವರಿಸಿರುವ ನವವಿಧ ಭಕ್ತಿಯ ಬೆಳವಣಿಗೆಯ ಗುರುತಾಗಿದೆ. ಭಕ್ತನು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮ ನಿವೇದನ – ಎಂಬ ಶಾರೀರಿಕ, ವಾಚಿಕ ಮತ್ತು ಮಾನಸಿಕ ಕ್ರಿಯೆಗಳಿಂದ ಮಾನವನು ಪರಮಾತ್ಮನನ್ನು ಸೇವಿಸುತ್ತಾನೆ. ದಾಸಭಾವಕ್ಕಿಂತ ಸಖ್ಯ ಅಥವಾ ಮಧುರ ಭಾವದಲ್ಲಿ ಭಕ್ತನು ಭಗವಂತನಲ್ಲಿ ಹೆಚ್ಚಿನ ಸಲುಗೆಯನ್ನು ತೋರುವ ಭಕ್ತಿ ಹೆಚ್ಚು ಮೇಲ್ಮಟ್ಟದ್ದು. ಇದೇ ಸರ್ವ ಭಕ್ತಿ ಭಾವಗಳ ಸಮನ್ವಯ ರೂಪವೂ ಹೌದು, ಶಿಖರ ಪ್ರಾಯವೂ ಹೌದು.

ಭಗವಂತನ ಅವತಾರದ ಕಲ್ಪನೆಯಿಂದ ಭಕ್ತಿ ಸಾಹಿತ್ಯಕ್ಕೆ ಹೆಚ್ಚಿನ ಪುಷ್ಟಿ ದೊರೆಯಿತು. ಭಕ್ತನು ತನ್ನ ಬಂಧು - ಬಳಗದ ಮೇಲೆ ತೋರುವ ಪ್ರೇಮವನ್ನು ಅಥವಾ ಹೆಚ್ಚಿನ ಮಟ್ಟದ ಪ್ರೇಮವನ್ನು ಭಗವಂತನ ಅವತಾರಗಳಲ್ಲಿ ತೋರಿದ್ದಾನೆ ; ತೋರಿಸುತ್ತಾನೆ. ಯಾವುದೆ ಒಂದು ಅವತಾರವನ್ನು ಕುರಿತ ಏಕಾಂತ ಭಕ್ತಿಯ ಭಕ್ತಿ ಸಾಹಿತ್ಯಕ್ಕೆ ವಿಶೇಷ ಮೆರಗು ನೀಡಿತು.

ಭಾರತದಲ್ಲಿ ಭಕ್ತಿ ಪಂಥವು ಜನಸಾಮಾನ್ಯರ ಮನಸ್ಸನ್ನು ಸುಲಭವಾಗಿ ಸೆಳೆಯಿತು. ಭಕ್ತಿಮಾರ್ಗವು ಮೇಲು - ಕೀಳೆಂಬ ಭೇದ - ಭಾವವಿಲ್ಲದೆ ಸರ್ವಮತೀಯರಿಂದಲೂ ಆಚರಿಸಲು ಸುಲಭವಾದ ಮಾರ್ಗವಾಯಿತು. ಭಕ್ತಿ ಮಾರ್ಗದಲ್ಲಿ ತಪಸ್ಸಿನ ಕಠಿಣತೆಯಾಗಲಿ, ನಿಷ್ಠುರತೆಯಾಗಲಿ ಇಲ್ಲ. ಜಾತಿ, ಧರ್ಮ, ಲಿಂಗ, ವಯಸ್ಸು ಮೊದಲಾದ ಕಂಟಕಗಳಂತೂ ಇಲ್ಲವೇ ಇಲ್ಲ. ಭಗವದ್ಗೀತೆಯ ಹನ್ನೆರಡನೆ ಅಧ್ಯಾಯದಲ್ಲಿ ಭಕ್ತಿಯ ಸೌಲಭ್ಯವು ಬಹು ಸುಂದರವಾಗಿ ನಿರೂಪಿತವಾಗಿದ್ದು 'ನನ್ನಲ್ಲಿಯೆ ಮನಸ್ಸನು ಇಡು, ನನ್ನಲ್ಲಿಯೆ ಬುದ್ಧಿಯನ್ನಿಡು ಎಂದರೆ ನನ್ನಲ್ಲಿಯೆ ನೀನು ನಿವಾಸ ಮಾಡಿಕೊಂಡು ಇರುತ್ತೀಯೆ' - ಎಂದು ಶ್ರೀ ಕೃಷ್ಣನು ಆಶ್ವಾಸನೆ ನೀಡುತ್ತಾನೆ.

ಮಹಾಭಾರತದಲ್ಲಿ ನಿರೂಪಿತವಾಗಿರುವ ಭಕ್ತಿಗೆ ಏಕಮೇವ ನಿದರ್ಶನ ಭಗವದ್ಗೀತೆ. ವಾಸುದೇವನು ಅರ್ಜುನನಿಗೆ ಗೀತೆಯನ್ನು ಭೋದಿಸಿದಾಗ ಭಕ್ತಿ ಒಂದು ಘಟ್ಟವನ್ನು ಮುಟ್ಟಿತು. ವಿದುರನ ಭಕ್ತಿ, ಭೀಷ್ಮರ ಭಕ್ತಿ, ದ್ರೌಪದಿಯ ಭಕ್ತಿ, ಧರ್ಮಾರ್ಜುನರ ಭಕ್ತಿಗಳು ಒಂದೊಂದು ಬಗೆಯ ನಿದರ್ಶನ. ಶ್ರೀ ಕೃಷ್ಣನು ತನ್ನ ಮೇಲೆ ಚಕ್ರವನ್ನೆತ್ತಿದಾಗ 'ನಾನು ನಿನ್ನ ದಾಸನಾಗಿದ್ದೇನೆ' ಎಂದು ಭೀಷ್ಮರು ಅವನಿಗೆ ಸಾಷ್ಟಾಂಗ ನಮಸ್ಕರಿಸುವುದು ವೀರಭಕ್ತಿಯ ಉದಾಹರಣೆಯಾಗಿದೆ. ಶ್ರೀ ಕೃಷ್ಣನು ಪಾಂಡವರಿಗೆ 'ವಿಜಯ' ತಂದುಕೊಡುತ್ತಾನೆ. ವಿಶ್ವರೂಪ ದರ್ಶನ ಮಾಡಿಸುತ್ತಾನೆ.

ರಾಮಾಯಣದಲ್ಲೂ ಭಕ್ತಿಯ ವಿವಿಧ ಪ್ರಕಾರವನ್ನು ಕಾಣುತ್ತೇವೆ. ಹನುಮಂತನಂತೂ ದಾಸ್ಯ ಭಕ್ತಿಗೆ ಪರಮ ನಿದರ್ಶನ. ಅದರಲ್ಲೂ ಹನುಮ ಕರ್ನಾಟಕದ ಭಕ್ತ. ಶ್ರೀ ರಾಮನ ಯಜ್ಞ ಶಾಲೆಯಲ್ಲಿ ಲವ ಕುಶರು ವೀಣೆಯೊಂದಿಗೆ ವಾಲ್ಮೀಕಿ ಮಹಾಮುನಿ ಪ್ರಣೀತವಾದ 'ಶ್ರೀಮದ್ ರಾಮಾಯಣ'ವನ್ನು ಗೇಯ ರೂಪದಲ್ಲಿ ನಿವೇದಿಸಿದಾಗ ಭಕ್ತಿಯ ಒಂದು ಪ್ರಕರವಾದ ಭಗವನ್ನಾಮ ಸಂಕೀರ್ತನೆ ಪ್ರಕಟಗೊಂಡಿತು.

ಪದ್ಮ ಪುರಾಣದಲ್ಲಿ ಭಾಗವತ ಮಹಿಮೆಯು ನಿರೂಪಿತವಾದ ಸಂದರ್ಭದಲ್ಲಿ ಭಕ್ತಿಯ ಉಗಮ, ವೃದ್ಧಿ, ಜರ್ಜರಿತಗಳನ್ನು ಕುರಿತು ಒಂದು ಸುಂದರ ರೂಪಕವೆ ಹೆಣೆದಿಟ್ಟಿದೆ. ಭಕ್ತಿಯು ಹೆಣ್ಣಾಗಿ, ಜ್ಞಾನ ಮತ್ತು ವೈರಾಗ್ಯ - ಎಂಬ ಪುತ್ರರೊಡನೆ ಕಾಲಯೋಗದಿಂದ ಜರ್ಜರಿತಳಾಗಿರುವುದನ್ನು ತ್ರಿಲೋಕ ಸಂಚಾರಿ ನಾರದರಲ್ಲಿ ಹೇಳಿಕೊಂಡಾಗ 'ಇದು ಕಲಿಯುಗದ ಮಹಿಮೆ'! ಎಂದು ಹೇಳಿ ಸಂತೈಸುತ್ತಾರೆ. ಆಳ್ವಾರರಿಂದ ಭಕ್ತಿಯು ದ್ರಾವಿಡ ದೇಶದಲ್ಲಿ ಜನ್ಮತಾಳಿತು. 'ನಾಲಾಯಿರ ಪ್ರಬಂಧಂ' ಎಂಬ ಗ್ರಂಥದಲ್ಲಿ ಆಳ್ವಾರರ ಚರಿತ್ರೆ ಇದೆ. ಈ ವೈಷ್ಣವ ಭಕ್ತಿಯೊಂದಿಗೆ ಶೈವ ಭಕ್ತಿಯೂ ಬೆಳೆದು ಕರ್ನಾಟಕದಲ್ಲಿ ವಚನಕಾರರಿಂದ ಬೆಳೆಯಿತು. ಹರಿ ಹರನ ರಗಳೆಗಳಲ್ಲಿ ಶಿವ ಭಕ್ತರ ಚರಿತ್ರೆಗಳು ಚಿತ್ರಿತವಾಗಿದ್ದು ಒಂದೊಂದು ಚರಿತ್ರೆಯು ಭಕ್ತಿಯ ಪಾರಮ್ಯಕ್ಕೆ ತಕ್ಕ ಉದಾಹರಣೆ.

ರಾಮಾನುಜಾಚಾರ್ಯರು ಮತ್ತು ಮಧ್ವಾಚಾರ್ಯರು ದಕ್ಷಿಣ ಭಾರತದಲ್ಲಿ ಇಬ್ಬಗೆಯ ವೈಷ್ಣವ ಪಂಥ ಸ್ಥಾಪಿಸಿದರು. ಇಬ್ಬರ ಕಾರ್ಯ ಕ್ಷೇತ್ರವೂ ಕರ್ನಾಟಕವೆಂಬುದು ವಿಶೇಷ! ರಾಮಾನುಜರು ಕಂಚಿ, ಶ್ರೀರಂಗಂ ಬಿಟ್ಟು ಕರ್ನಾಟಕಕ್ಕೆ ಬಂದು ಬೇಲೂರು, ಮೇಲುಕೋಟೆಗಳಲ್ಲಿ ತಮ್ಮ ಧರ್ಮಪಂಥ ಮುಂದುವರೆಸಿದರು. ಇವರ ಜಾತ್ಯತೀತ ವಿಶಾಲ ಮನೋಭಾವ ಬಹು ಜನರನ್ನು ಆಕರ್ಷಿಸಿತು. ಹೊಯ್ಸಳ ವಿಷ್ಣು ವರ್ಧನನು ವೈಷ್ಣವನಾಗಿ ಬಿಟ್ಟದೇವ ನೆನೆಸಿಕೊಂಡಿದ್ದು ಇತಿಹಾಸ. ಕವಿ ಕುಮಾರವ್ಯಾಸನಂತೂ ವ್ಯಾಸ ಭಾರತವನ್ನು ಕೃಷ್ಣ ಕಥೆಯನ್ನಾಗಿಸಿ ಪುನರ್ರಚಿಸಿದಾಗ

ತಿಳಿಯ ಹೇಳುವ ಕೃಷ್ಣ ಕಥೆಯನು!
'ತಿಳಿಯ ಹೇಳುವ ಕೃಷ್ಣ ಕಥೆಯನು!
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯ ನೊರೆವೆನು ಕೃಷ್ಣ ಮೆಚ್ಚಲಿಕೆ

ಎಂದು ಸಾರಿದ ನಾರಣಪ್ಪನ ಕಣ್ಣಿನಲ್ಲಿ ಗದುಗಿನ ಭಾರತವು ಕೃಷ್ಣಕಥೆಯಾಯಿತು. 'ಒಲಿದವರನುಜ್ಜೀವಿಸುವ ಬಗೆ ಬಲಹು ಮುರ ಮಥನಂಗೆ', 'ನಂಬಿದವರಿಗೆ ತನ್ನ ತೆತ್ತಿಹ' - ಎಂದು ಕೃಷ್ಣನಿಗೆ ಬಿರುದು ನೀಡಿದ ಕವಿಯು ಭಾರತ ಯುದ್ಧವು ಪಾಂಡವರ ಗೆಲುವು ಎನಿಸದೆ ಕೃಷ್ಣನ ಗೆಲುವು ಅರ್ಥಾತ್ ಭಕ್ತಿಯ ಗೆಲುವು ಎನಿಸಿದೆ.

## ಮಹಾರಾಷ್ಟ್ರದಲ್ಲಿ ಭಕ್ತಿಪಂಥ :

ಕರ್ನಾಟಕದ ಭಾಗವತ ಭಕ್ತಿಯೇ ಮಹಾರಾಷ್ಟ್ರದ ಸಂತರಾದ ಜ್ಞಾನೇಶ್ವರ, ತುಕಾರಾಂ, ಏಕನಾಥ್, ನಾಮದೇವ ಮೊದಲಾದ ಸಂತ ಕವಿಗಳಿಗೆ ಸ್ಫೂರ್ತಿ, ಪ್ರೇರಣೆ ನೀಡಿತು. ಮಹಾರಾಷ್ಟ್ರದ ಈ ಭಾಗವತರಿಗೆ ಪಂಡರ ಪುರವೇ ಪುಣ್ಯ ಕ್ಷೇತ್ರವಾಗಿತ್ತು. ಮಹಾನುಭಾವ ಪಂಥಿಯರೂ, ನಾಥ ಪಂಥಿಯರೂ ಹಾಗೂ ವಾರ್ಕರಿ ಪಂಥಿಯರೂ ಪಂಡರ ಪುರದ ವಿಠಲನ ಭಕ್ತರಾಗಿದ್ದರು. ಶಿವ-ವಿಷ್ಣು ಇಬ್ಬರೂ ಏಕವೆಂದೂ, ವರ್ಣಾಶ್ರಮ ಭೇದವಿಲ್ಲದೆ ಎಲ್ಲರೂ ಆತ್ಮಾನುಭಾವ ಹೊಂದಬಹುದು ಎಂದು ನಂಬಿದವರು.

ಸಂತ ತುಕಾರಾಮರು ಜ್ಞಾನೇಶ್ವರರಿಂದ ಪ್ರಭಾವಿತರಾಗಿದ್ದು, ಭಕ್ತಿ ಸಂಕೀರ್ತನೆಯನ್ನು ತಮ್ಮ 'ಅಭಂಗ' ಗಳಲ್ಲಿ ಕೊಂಡಾಡಿದ್ದಾರೆ.

'ವಚನದಲ್ಲಿ ನಾಮಾಮೃತ ತುಂಬಿ' ಎಂದು ಬಸವೇಶ್ವರರು ಹಾಡಿದಂತೆ, 'ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ಎಂದು ಪುರಂದರದಾಸರು ಹಾಡಿದಂತೆ', ಸಂತ ನಾಮದೇವರು ಒಂದು ಅಭಂಗದಲ್ಲಿ ಅಮೃತಾಹುನಿಗೋಡ ನಾಮ 'ತುರ್ಝೇದೇವಾ' ಅಂದರೆ ಪಂಡರಿನಾಥನ ನಾಮ ಸ್ಮರಣೆಯು ಅಮೃತದಷ್ಟೇ ಅಲ್ಲ ಅಮೃತಕ್ಕಿಂತ ಸವಿ ಎಂದಿದ್ದಾರೆ.

ಸಂತ ಜ್ಞಾನೇಶ್ವರರು ವಿಠಲಮೂರ್ತಿಯನ್ನು ಕಂಡಾಗ ತಮಗಾದ ಹರ್ಷ, ನಿರ್ಭರತೆಯನ್ನು ಒಂದು ಅಭಂಗದಲ್ಲಿ ಹೀಗೆ ಹೇಳಿದ್ದಾರೆ :

ರೂಪಪಾಹತಾ ಲೋಚನಿ । ಸುಖಝಾಲೆ ಓ ಸಾಜನಿ
ತೋಹಾ ವಿಠಲ ಬರುವಾ । ತೋಹಾ ಮಾಧವ ಬರವಾ ॥

ಜ್ಞಾನೇಶ್ವರರ ಅಭಂಗದಲ್ಲಿ ಆ ಕಾಲದ ಮರಾಠಿ ಭಾಷೆಯ ಅವಸ್ಥೆಯನ್ನು ಕಾಣಬಹುದು.

ನಾಮ ಸಂಕೀರ್ತನೆಗೆ ಇಂಥದೆ ಕಾಲ, ಇಂಥದೆ ವೇಳೆ ಎಂಬುದಿಲ್ಲ, ಜಾತಿ - ಮತ ಎಂಬುದು ಮೊದಲೇ ಇಲ್ಲ. ನಾಮ ಸಂಕೀರ್ತನೆಯಷ್ಟು ಸೌಲಭ್ಯ ಇನ್ನೊಂದು ಸೌಲಭ್ಯಕ್ಕಿಲ್ಲ. ಸಂತ ನಾಮದೇವರು ಹೇಳುತ್ತಾರೆ :

ಕಾಳವೇಳನಸ್ವ ನಾಮ ಸಂಕೀರ್ತನೆ । ವುಂಚ ನೀಚ ಯೋನಿ ಹೇ ಹೀನಸೇ ॥
ಧರಾ ನಾಮ ಕಂಠಿ ಸದಾ ಸರ್ವಕಾಳ । ಮಗತೋ ಗೋಪಾಲ ಸಂಭಾಳೀಲ ॥
ಕೃಪಾಳು ಶೋವಸಾ ಸುಖಾ ಚಾ ಸಾಗರ । ಕರೀಲ ಉದ್ಧಾರ ಭಾವಿಕಾಸಿ ॥
ನಾಮಾಮ್ಹಣೇ ಫಾರ ಸೋ ಪೇ ಹೇ ಸಾಧನ । ವಾಚೇನಾಮ ಘೇಣೆ ಇತುಕೇಚಿ ॥

ಹೀಗೆ ಶ್ರೀ ಜ್ಞಾನೇಶ್ವರ್, ಶ್ರೀ ನಾಮದೇವ್, ಶ್ರೀ ಏಕನಾಥ್, ಶ್ರೀ. ತುಕಾರಾಂ, ಶ್ರೀ. ರಾಮದಾಸ್ - ಈ ಐವರು ಸಾಧುಗಳನ್ನು ಮಹಾರಾಷ್ಟ್ರದ ಸಾಧು ಪಂಚಾಯತನ ಎಂದು ಕರೆಯುತ್ತಾರೆ. ಇವರೆಲ್ಲರು ಮಧ್ವಾಚಾರ್ಯರ ಹಾದಿಯಲ್ಲಿ ನಡೆದರು. ಹೀಗೆ ಉತ್ತರ ಭಾರತದಲ್ಲಿ ಮಧ್ವಾಚಾರ್ಯರ ಪ್ರಭಾವವು ಹೆಚ್ಚಾಗಿದೆ. ಗುಜರಾತಿನಲ್ಲಿ ವ್ಯಾಸತೀರ್ಥರ ಸಮಕಾಲೀನರಾದ

ವಲ್ಲಭಚಾರ್ಯರು ಭಾಗವತ ಧರ್ಮವನ್ನು ಪ್ರಚಾರ ಪಡಿಸಿದರು. ನರ್ಸಿಮೆಹತಾ ಎಂಬ ಸಂತಕವಿ ವಿಷ್ಣು ಭಕ್ತಿಯನ್ನು 'ವೈಷ್ಣವ ಜನತೋತೇನೇ ಕಹಿಯೆ ಜೋ ಪೀಡಪರಾಯೆ ಜಾಣೇರೆ' ಎಂದು ಗುಜರಾತ್ ಭಾಷೆಯಲ್ಲಿ ಹಾಡಿದ ಲೋಕ ಪ್ರಿಯ ಗೀತೆ ಗಾಂಧೀಜಿಯವರ ವಿಶೇಷ ಮೆಚ್ಚುಗೆಗಳಿಸಿತು.

ನರಹರಿ ತೀರ್ಥರು ಒರಿಸ್ಸಾ ದೇಶದ ಗಜಪತಿ ಅರಸರಲ್ಲಿ ಅಧಿಕಾರಿಯಾಗಿದ್ದು ಮುಂದೆ ರಾಜ್ಯಪಟ್ಟ ಏರಿದರು. ಮಧ್ವಾಚಾರ್ಯರು ಪಾಜಕ ಕ್ಷೇತ್ರದಲ್ಲಿ ಅವತಾರ ಹೊಂದಿ ಉಡುಪಿಯಲ್ಲಿ ಶ್ರೀ ಕೃಷ್ಣನ ಮೂರ್ತಿ ಪ್ರತಿಷ್ಠಾಪಿಸಿ ಶ್ರೀ. ವಿಷ್ಣು ತೀರ್ಥ, ಪದ್ಮನಾಭ ತೀರ್ಥ, ನರಹರಿ ತೀರ್ಥ, ಮಾದವತೀರ್ಥ, ಅಕ್ಷೋಭ್ಯತೀರ್ಥ, ಮೊದಲಾದ ಸನ್ಯಾಸಿಗಳನ್ನು ಮದ್ವಾಚಾರ್ಯರು ಪಾಜಕ ಕ್ಷೇತ್ರದಲ್ಲಿ ನೆಲೆನಿಂತು ಉಡುಪಿಯಲ್ಲಿ ಶ್ರೀ ಕೃಷ್ಣನ ಮೂರ್ತಿ ಪ್ರತಿಷ್ಠಾಪಿಸಿ ಶ್ರೀ ವಿಷ್ಣುತೀರ್ಥ, ಪದ್ಮನಾಭ ತೀರ್ಥ, ನರಹರಿ ತೀರ್ಥ, ಮಾಧವ ತೀರ್ಥ, ಅಕ್ಷೋಭ್ಯ ತೀರ್ಥ ಮೊದಲಾದ ಸನ್ಯಾಸಿಗಳನ್ನು ಶಿಷ್ಯರನ್ನಾಗಿಸಿ ವೈದಿಕ ತತ್ವವಾದವನ್ನು, ಹರಿಭಕ್ತಿಯನ್ನು ಪ್ರಚಾರಗೊಳಿಸಿದರು. ಮಧ್ವರು ತುಳು ಭಾಷೆಯಲ್ಲಿ ಭಕ್ತಿಗೀತೆಗಳನ್ನು ರಚಿಸಿ ಸ್ತ್ರೀಯರಿಗೂ, ಶೂದ್ರರಿಗೂ ಉಪಕಾರ ಮಾಡಿದರೆಂದು ತಿಳಿದು ಬಂದಿದೆ.

ಕನ್ನಡದಲ್ಲಿ ಉಪಲಬ್ದವಿರುವ ಕೀರ್ತನ ಸಾಹಿತ್ಯವನ್ನು ಅವಲೋಕಿಸುವಾಗ ಡಾ || ಎಲ್. ಬಸವರಾಜು ರವರು ಮಾಡಿರುವ ಅಮೋಘವಾದ ಸಂಶೋಧನೆಯಿಂದ ಶಿವದಾಸ ಗೀತಾಂಜಲಿ - ಎಂಬ ಗ್ರಂಥವನ್ನು ಮರೆಯುವಂತಿಲ್ಲ. ಈ ಗ್ರಂಥದಲ್ಲಿ ಪ್ರಕಟಗೊಂಡಿರುವ ಸಕಲೇಶ ಮಾದರಸನ ಒಂದು ಕೀರ್ತನವೇ ಈಗ ಅತ್ಯಂತ ಪ್ರಾಚೀನ. ಅದು ಹೀಗಿದೆ :

ತಂಗಾಳಿಗಲಿರು ಮರನೆ, ಎ -
ನ್ನಂಗದೊಳಿರ್ಪ ಶಿವಲಿಂಗದರಘುನೆ || ಪಲ್ಲವಿ ||
ಸಂಪಗೆಯ ಮರನನೇರು ಪರಿಮಳದ
ಕಂಪ ಕೊಯ್ವನಾರೆಲೋ ? ಇಂಪುಳ್ಳ
ಜಾಣ ನಲ್ಲಮ ಕಾಣೆ ಕೆಳದಿ !

ಹೀಗೆ ಪ್ರಾರಂಭವಾಗಿ ಮೂರು ಖಂಡಿಕೆಯಾದ ಮೇಲೆ ಕೊನೆಯಲ್ಲಿ

ಸುತ್ತಿ ಮುತ್ತಿದ ಮಾಯೆಗೆ ಇವಕೆಲ್ಲ
ಕರ್ತೃ ಶಿವನೊಬ್ಬ ಕಾಣೇ । ಎನ್ನ
ಚಿತ್ತ ಶುದ್ದವ ಮಾಡು ಸಕಳೇಶ ಕೆಳದಿ !

ಎಂದು ಒಂದು ಪಲ್ಲವಿ ಪದ್ಯ ಹಾಗೂ ಐದು ಸ್ಥೂಲ ರೂಪದ ತ್ರಿಪದಿಗಳಿವೆ. ಇದಲ್ಲದೆ ಕ್ರಿ.ಶ ಏಳನೆ ಶತಮಾನದ ಬಹು ಪ್ರಸಿದ್ದವಾದ ಬಾದಾಮಿ ಶಾಸನದಲ್ಲಿ ಕಪ್ಪೆ ಆರಭಟ್ಟನ ಕೀರ್ತನೆಯನ್ನುಳ್ಳ ಶಾಸನವನ್ನು ಪರಿಶೀಲಿಸಬಹುದು.

ಸಾಧೂಗೆ ಸಾಧು ಮಾಧೂರ್ಯನ್ಗೆ ಮಾಧೂರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವೀಪರೀತ
ನ್ಮಾ ಧವ ನೀತನ್ಪೆರನಲ್ಲ.

ಇಲ್ಲಿ ಒಂದು ಪಲ್ಲವಿಯ ಜೊತೆಗೆ ಒಂದು ಸಂಸ್ಕೃತ ಪದ್ಯ , ಮೂರು ತ್ರಿಪದಿಗಳು ಬಂದಿವೆ.

ಕನ್ನಡ ಸಾಹಿತ್ಯದ ಪ್ರಮುಖ ಪ್ರಕಾರವಾಗಿ ಬೆಳೆದು, ಕನ್ನಡ ಸಂಸ್ಕೃತಿಗೆ ಭದ್ರ ಬುನಾದಿ ಹಾಕಿದ ಭಕ್ತಿಪಂಥದ ಪ್ರತಿಪಾದಕರಾದ 'ದಾಸನಕುಲ' ದ ಮೂಲ ಹರಿದಾಸರು ಯಾರು ಎಂಬ ಬಗ್ಗೆ ಒಂದಿಷ್ಟು ಭಿನ್ನಾಭಿಪ್ರಾಯಗಳಿವೆ. ಕೀರ್ತನೆ ಸಾಹಿತ್ಯದ ಆದ್ಯ ರಚನೆಕಾರ ನರಹರಿತೀರ್ಥರೊ, ಶ್ರೀ ಪಾದರಾಯರೊ, ಅಥವಾ ಅಚಲಾನಂದದಾಸರೊ -ಎಂಬುದಕ್ಕೆ ಸ್ಪಷ್ಟ ಆಧಾರಗಳು ದೊರೆತಿಲ್ಲ. ಹದಿಮೂರನೆ ಶತಮಾನದ ಕೊನೆಗಿದ್ದ ನರಹರಿತೀರ್ಥನು ' ದಾಸಕೂಟದ ಮೂಲ ಪುರುಷ ' ಎಂದಾದರೆ ಅವರ ತರುವಾಯ ಹದಿನೈದನೆ ಶತಮಾನದ ಶ್ರೀ ಪಾದರಾಯರವರೆಗೂ ಯಾರ ಹೆಸರೂ ಕೇಳಬರುವುದಿಲ್ಲ. ದಾಸಕೂಟಕ್ಕೆ ಹಿರಿಯನೆಂದು ಕೀರ್ತನಕಾರರು ಮೊದಲು ಶ್ರೀ ಪಾದರಾಯರನ್ನು ನೆನೆದಿರುವುದನ್ನು ನೋಡಿದರೆ ನರಹರಿ ತೀರ್ಥರ ಬದಲು ಅವರೇ ಮೊದಲಿಗರಾಗಿರಬಹುದೆಂದು ತೋರುತ್ತದೆ. ದಾಸ ಸಾಹಿತ್ಯ ರಚನೆಯಲ್ಲಿ ಸದ್ಯಕ್ಕೆ ಪ್ರಪ್ರಥಮರೆಂದು ಪರಿಗಣಿಸಲ್ಪಟ್ಟಿರುವ ಶ್ರೀ ಪಾದರಾಜರ ರಚನೆಗಳಲ್ಲಿ ಹರಿಭಕ್ತಿ ಪ್ರತಿಪಾದನೆಯತ್ತ ಗಮನ ಹರಿದಿರುವಷ್ಟು ಜನರ ಉಪದೇಶಗಳ ಕಡೆ ಹರಿದಿಲ್ಲವೆಂದು ಹೇಳಬಹುದು. ಪ್ರತಿಪಾದನೆಯತ್ತ ಗಮನ ಹರಿದಿರುವಷ್ಟು ಜನರಿಗೆ ಉಪದೇಶ ನೀಡುವ ಕಡೆ ಹರಿದಿಲ್ಲವೆಂದು ಹೇಳಬಹುದು.

## ದಾಸ ಸಾಹಿತ್ಯವು ಮುಖ್ಯವಾಗಿ ನಾಲ್ಕು ಘಟ್ಟಗಳಾಗಿ ವಿಂಗಡಿಸಲ್ಪಟ್ಟಿದೆ. ಅವುಗಳೆಂದರೆ

1. ಪುರಂದರದಾಸರ ಪೂರ್ವದ ಸಾಹಿತ್ಯವು ಮಧ್ವಾಚಾರ್ಯರ ಕಾಲದ ಭಾಗವತ ಮಾರ್ಗದಲ್ಲಿ ಕೀರ್ತನೆಗಳ ಉದಯಕಾಲ. ಈ ಹಂತದಲ್ಲಿ ನರಹರಿತೀರ್ಥರು, ಶ್ರೀ ಪಾದರಾಯರು, ವ್ಯಾಸತೀರ್ಥರು , ಇನ್ನಿತರ ಹೆಸರಾಂತ, ಅಜ್ಞಾತ ದಾಸಿಕವಿಗಳು ಬರುತ್ತಾರೆ. (ಕ್ರಿ.ಶ. 13 ರಿಂದ 16 ನೆ ಶತಮಾನ)

2. ಈ ಘಟ್ಟವನ್ನು ದಾಸ ವಾಙ್ಮಯದ ಉಚ್ಛ್ರಾಯಕಾಲ ಎನ್ನಬಹುದು. ಇದು ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯ ಕಾಲ. ಈ ಕಾಲದ ದಾಸರೆಂದರೆ ಪುರಂದರ ಮತ್ತು ಕನಕದಾಸರು. ( ಕ್ರಿ.ಶ. 16 ರಿಂದ 18 ನೇ ಶತಮಾನದ ಮಧ್ಯದವರಿಗೆ ).

3. ಈ ಘಟ್ಟವು ವಿಜಯದಾಸ ಪ್ರಮುಖರಾದ ದಾಸರ ಭಾಗವತ ಪರಂಪರೆಯ ಪುರೋಭಿವೃದ್ಧಿಗೆ ಸಂಬಂಧಿಸಿದೆ. (ಕ್ರಿ.ಶ. 18ನೇ ಶತಮಾನದಿಂದ 19 ನೇ ಶತಮಾನದ ಮಧ್ಯಭಾಗ).

4. ಈ ಹಂತದಲ್ಲಿ ಗುರು ಪ್ರಾಣೇಶ ವಿಠಲರೇ ಪ್ರಮುಖರಾದ ದಾಸಕೂಟಕ್ಕೆ ಸಂಬಂಧಿಸಿದೆ. ( ಕ್ರಿ.ಶ.19 ನೇ ಶತಮಾನದಿಂದ 20 ನೇ ಶತಮಾನದ ಮಧ್ಯದವರೆಗೆ)

## ನರಹರಿ ತೀರ್ಥರು :-

ಇವರು ಮಧ್ವಾಚಾರ್ಯರ ಶಿಷ್ಯರು, ಇವರ ಕೀರ್ತನೆ, ದೊರೆತಿರುವುದು ಸದ್ಯಕ್ಕೆ 2-3 ಮಾತ್ರ. ಭಕ್ತನು ತನ್ನ ಮೇಲೆ ಆರೋಪಿಸಿಕೊಂಡಿರುವ ಪ್ರೀತಿ, ಧನಾದಿ ವಿಷಯದಲ್ಲಿ ನಿರ್ಭೀತೊ, ದೈವಗುರುದ್ರೋಹ , ಏಕಾಂತದಲ್ಲಿ ಸ್ವಾರ್ಥಗೋಷ್ಠಿ, ಲೋಕಾಂತದಲ್ಲಿ ವೈರಾಗ್ಯ ಪ್ರೀತಿ. ಬಾಹ್ಯಾಡಂಬರದ ಜೀವನ, ಸಮಾಜದಲ್ಲಿ ಸುಳ್ಳು ಪ್ರತಿಷ್ಠೆ, ಧರ್ಮಕ್ಕೆ ಕೊಟ್ಟ ಒಂದು ಕಾಸು ಸಾವಿರ ಹೊನ್ನಿಗೆ ಸಮ, ಅಧರ್ಮಕ್ಕೆ ಕೊಟ್ಟ ಕೋಟಿ ಹೊನ್ನು ಒಂದು ಕಾಸಿಗೆ ಸಮ - ಇಂತಹ ಕರ್ಮವ ಮಾಡುವ ಮಾನವ ಎಂತಹ ಮರುಳ ಎಂದು ನರಹರಿದಾಸರು ಉದ್ಗಾರ ತೆಗೆದಿದ್ದಾರೆ.

ಮತ್ತೊಂದು ಕೀರ್ತನೆಯಲ್ಲಿ ಮಧುರಭಕ್ತಿ ವ್ಯಕ್ತವಾಗಿದ್ದು, ಭಕ್ತನಾದ ತನ್ನಲ್ಲಿ ಕರುಣೆಯನ್ನು ತೋರದೆ ಇರುವುದು ಸರಿಯೆ ? ಎಂದು ಹರಿಯನ್ನು ಆಕ್ಷೇಪಿಸಿದ್ದಾರೆ.

## ಶ್ರೀ ಪಾದರಾಯರು :-

ಇವರು ರಾಮನಗರ ಜಿಲ್ಲೆಯ ಚನ್ನಪಟ್ಟಣ ತಾಲ್ಲೋಕಿನ ಅಬ್ಬೂರಿನಲ್ಲಿ ಜನಿಸಿ, ಶ್ರೀರಂಗಂ ನಲ್ಲಿ ಸನ್ಯಾಸ ಸ್ವೀಕರಿಸಿ, ಅಲ್ಲಿನ ಮಠಾಧಿಪತಿಯಾಗಿದ್ದು ನಂತರ ಮುಳಬಾಗಿಲಿಗೆ ಬಂದು ಕಡೆವರೆಗೂ ನೆಲೆಯಾಗಿ ನಿಂತರು. ಇವರು ಭಾಗವತ ಧರ್ಮದ ಪ್ರಚಾರವನ್ನು ಮಾಡುವುದರ ಸಲುವಾಗಿ ಕನ್ನಡದಲ್ಲಿಯೆ ಹರಿಕೀರ್ತನೆಗಳನ್ನು ರಚಿಸಿ ಭಾಗವತರಿಂದ ಹಾಡಿಸಬೇಕೆಂಬ ಸಂಕಲ್ಪ ಮಾಡಿದ್ದರು. ವಾಕ್ಯಾರ್ಥ ಮಾಡಿ ವಾದಿನಿಗ್ರಹ ಮಾಡುವುದರಿಂದ ಪಾಮರ ಸಮಾಜದ ಉದ್ಧಾರ ಹೇಗಾಗಬೇಕು ? ಅವರಲ್ಲಿ ಭಕ್ತಿ ಹೇಗೆ ಉದ್ದೀಪನಗೊಳ್ಳಬೇಕು ? ಎಂದು ಚಿಂತಿಸಿ ಕನ್ನಡ ಕೀರ್ತನೆಗಳನ್ನು ರಚಿಸಲು ಪ್ರಯತ್ನಿಸಿ ಯಶಸ್ವಿಯೂ ಆದರು. ಇದರಿಂದ ಕನ್ನಡ ಸಂಸ್ಕೃತಿ ಬೆಳೆಯಲು ಅವಕಾಶವಾಯಿತು. ಪೂಜಾಕಾಲದಲ್ಲಿ ವೈದ್ದಿಕ ಪಂಡಿತರಿಂದ ವೇದ ಪಾರಾಯಣ ಮಾಡಿಸುವಂತೆ ಭಾಗವತರಿಂದ ಕನ್ನಡ ದೇವರ ನಾಮಗಳನ್ನು ಹಾಡಿಸಿದರು. ಅದುವರೆಗೆ ಯಾವ ಮಠದಲ್ಲೂ ಪ್ರಾಕೃತ ಪದಗಳನ್ನು ಪೂಜಾಕಾಲದಲ್ಲಿ ಹಾಡಿಸುವ ಸಂಪ್ರದಾಯವಿರಲಿಲ್ಲ. ಕನ್ನಡ ಮಾತನಾಡಿದರೆ ಮೈಲಿಗೆ ಎಂದು ತಿಳಿದಿದ್ದ ಕಾಲದಲ್ಲಿ ಶ್ರೀ ಪಾದರಾಜರು ಒಂದು ಕ್ರಾಂತಿಯನ್ನೇ ಎಸಗಿದರು. ಮಠದ ಸ್ವಾಮಿಗಳಿಂದ ವಿರೋಧ ಬಂದಿರಬೇಕು. ಆದರೆ ಪಾಮರ ಜನತೆ ಅವರ ಭ್ರಮರಗೀತೆ, ವೇಣುಗೀತೆ, ಗೋಪಿಗೀತೆ, ಭ್ರಮರ ಗೀತೆ, ವೇಣು ಗೀತೆ, ಗೋಪಿ ಗೀತೆ ಕೇಳಿ ನಲಿದಾಗ ಶ್ರೀ ಪಾದರಾಜರಿಗೆ ತಮ್ಮ ಸಾಹಸ ಸಾರ್ಥಕವೆನಿಸಿತು. ಇದರಿಂದ ಉತ್ತೇಜಿತರಾಗಿ ಅವರು ಸ್ವತ: ರಾತ್ರಿ ಮಂಗಳಾರತಿಯ ಕಾಲದಲ್ಲಿ ದೇವರೆದುರಿಗೆ ಭಾಗವತ ಸೇವೆಗೆ ನಿಲ್ಲುತ್ತಿದ್ದರಂತೆ. ಭಾಗವತರು ನರ್ತನ ಮಾಡುತ್ತಿದ್ದರಂತೆ. ಈ ಅದ್ಭುತ ದೃಶ್ಯ ನೋಡಲು ಸಾವಿರಾರು ಜನ ನೆರೆದು ಮೈಮರೆಯುತ್ತಿದ್ದರಂತೆ. ಹೀಗೆ ಶ್ರೀಪಾದರಾಜರಿಂದ ಕನ್ನಡ ಹರಿದಾಸ ಕೀರ್ತನೆಯ ಅರಣ್ಯದಲ್ಲಿ ಚೈತ್ರ ಋತು ಕಾಲಿಟ್ಟಿತು.

ಚಂದ್ರಗಿರಿಯ ಸಾಳ್ವ ನರಸಿಂಜರಾಜನನ್ನು ಬ್ರಹ್ಮ ಹತ್ಯಾ ದೋಷದಿಂದ ಮುಕ್ತಿಗೊಳಿಸಿದ್ದರಿಂದ ಸಂತುಷ್ಟ ರಾಜನು ಕಾಶೀ ಯಾತ್ರೆಗೆ ಅನುಕೂಲ ಮಾಡಿಕೊಟ್ಟನು. ಕಾಶೀ ಪಟ್ಟಣದ ವಿದ್ವತ್ಸಭೆ

ಎಂದರೆ ಕೇವಲ ತರ್ಕ, ಪಾಂಡಿತ್ಯ ಪ್ರದರ್ಶನ. ಶ್ರೀ. ಪಾದರಾಜರು ಒಣ ವೇದಾಂತ ಹೇಳದೆ ಭಕ್ತಿಪೂರ್ವಕ ಭಾಗವತ ಧರ್ಮ ಭೋದಿಸಿ, ಅಲ್ಲಿನ ರಾಜ, ಸ್ವಾಮಿಗಳ ಹೃದಯ ಕರಗಿಸುವಂತಹ ವಿವೇಚನೆಯುತವಾದಮಾಡಿ ಜಯಶೀಲರಾದರೆಂದು ಪ್ರತೀತಿ ಇದೆ.

ತಮ್ಮ ಕೀರ್ತನೆಗಳ ಕೊನೆಗೆ 'ಶ್ರೀರಂಗ ವಿಠಲ' ಎಂಬ ಅಂಕಿತವನ್ನು ಇಟ್ಟುಕೊಂಡಿದ್ದಾರೆ. ( ಇದರಲ್ಲಿ ಶ್ರೀರಂಗ ನ ಸಂಬಂಧದೊಂದಿಗೆ ಪಂಡರಪುರದ ವಿಠಲನ ಸಂಬಂಧದ ಸೂಚನೆಯೂ ಇದೆ. ಶ್ರೀ ಪಾದರಾಯರು ದಾಸ ಸಾಹಿತ್ಯದ ಬಾಹ್ಯಾಂತರ ಸ್ವರೂಪಗಳಿಗೆ ತಮ್ಮದೆ ಆದ ಒಂದು ಶೈಲಿಯನ್ನು , ಚಂದೋರೂಪವನ್ನು , ಕೊಟ್ಟರು. ಕೀರ್ತನೆಗಳ ಒಕ್ಕಣಿಯು ಕೂಡ ಶ್ರೀಪಾದರಿಂದಲೆ ಒಂದು ರೂಪವನ್ನು ತಾಳಿತು. ಅವರ ಕೀರ್ತನೆಗಳೆಲ್ಲವೂ ಅಂತರಂಗ ಬಾವಗೀತೆಗಳಿದ್ದಂತೆ. ಭಕ್ತನ ಆತ್ಮಶೋಧನೆ, ಆತ್ಮ ನಿವೇಧನೆಗಳು ಭಕ್ತಿಯ ಗೀತೆಗಳಲ್ಲಿ ಸುಳಾದಿಗಳಾಗಿಯೊ, ಉಗಾಭೋಗಗಳಾಗಿಯೊ, ಕೀರ್ತನೆಗಳಾಗಿಯೊ ಹೊರಹೊಮ್ಮಿವೆ. ಉದಾ:

ಅನ್ನಂತ ಕಾಲದಲ್ಲಿ ನಿನ್ನ ನಾನರಿಯದೆ ಭವಗಳಲ್ಲಿ ಬಂದೆನೊ
ಅನ್ನಂತ ಕಾಲದಲ್ಲಿ ನಿನ್ನವನೆನಿಸದೆ ಮೂರುಖನಾದೆ ನೊ
ಅನ್ನಂತ ಕಾಲದಲ್ಲಿ ನಿನ್ನ ಚರಣರತಿಯಿಲ್ಲದೆ ನೊಂದೆನೊ
ಅನ್ನಂತ ಕಾಲದಲ್ಲಿ ಅದಾವ ಪುಣ್ಯದಿಂದ ಬಂದು ಇಂದು
ನಿನ್ನವನೆನಿಸಿದೆ ಅದಾವ ಪುಣ್ಯದಿಂದಲೆನ್ನಮನ
ನಿನ್ನಲ್ಲೆರಗಿತೊ ನೋಯದಂತೆ
ಎನ್ನ ಪೊರೆದು ಪಾಲಿಸೊ ದೀನನಾಥ ಶ್ರೀರಂಗವಿಠಲ.

----

' ಪಾಲಿಸಯ್ಯ ಸ್ವಾಮಿ ಕೃಷ್ಣ ಪಾಲಿಸಯ್ಯ ಎನ್ನ ನೀನು' ?
' ಇದನಾದರು ಕೊಡದಿದ್ದರೆ ನಿನ್ನ ಪದ ಕಮಲವ ನಂಬಿ ಭಜಿಸುವದೆಂತೊ'
' ಉರಿಯೊಳಗೆ ಬಿದ್ದು ಶರೀರವನು ಕಳೆಯಲೊ'
' ಇಟ್ಟಾಂಗೆ ಇರುವೆನೋ ಹರಿಯೇ ಎನ್ನದೊರೆಯೇ '
' ಹರಿನಾರಾಯಣನೆಂದು ಕರವೆತ್ತಿ ಮುಗಿದೊಮ್ಮೆ ಮೈ ಮರೆದು ನಟಿಸಲಿಲ್ಲ ಕೃಷ್ಣ'
' ಸತಿ ಅನುಕೂಲಬೇಕು ಸುತನಲ್ಲಿ ಗುಣಬೇಕು'
'ಭೃಂಗ ನಿನ್ನಟ್ಟಿದನೆ ಶ್ರೀ ರಂಗ ಮಧುರೆಲಿ ನಿಂದು'
'ಧರೆಯ ಮ್ಯಾಲೆ ಹಿರಿಯಳು ನಾನಿರಲು'

ಹೀಗೆ ಹಲವಾರು ಕೀರ್ತನೆಗಳನ್ನು ರಚಿಸಿದರೂ ನಮಗೆ ದೊರೆತಿರುವುದು ಸುಮಾರು ನೂರು ಮಾತ್ರ. ವಾಗ್ವಜ್ರ ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿ ಪ್ರಭುತ್ವ ತೋರಿದ್ದಾರೆ. ಆದರೂ ಕನ್ನಡದಲ್ಲಿ ಕೀರ್ತನೆ ರಚಿಸಿ ಕನ್ನಡ ಸಂಸ್ಕೃತಿಗೆ ಭದ್ರವಾದ ಬುನಾದಿ ಹಾಕಿದ ಶ್ರೀ ಪಾದರಾಜರು ಅಭಿನಂದನಾರ್ಹರು. ಸಂಸ್ಕೃತವನ್ನು ಬಿಟ್ಟು ಕನ್ನಡ ಕೀರ್ಥನೆ ರಚಿಸಲು ಕಾರಣವನ್ನು, ತಮ್ಮ ಮನದಿಂಗಿತವನ್ನು ಈ ಚಿಕ್ಕ ಉಗಾಭೋಗದಲ್ಲಿ ಅವರೇ ಹೇಳಿದ್ದಾರೆ.

ಧ್ಯಾನವು ಕೃತಯುಗದಿ
ಯಜನ ಯಜ್ಞವು ತ್ರೇತಾಯುಗದ
ದಾನವಾಂಥಕನ ದೇವತಾರ್ಚನೆ ದ್ವಾಪರ ಯುಗದಿ
ಆ ಮಾನವರಿಗೆಷ್ಟು ಫಲವೊ ಅಷ್ಟು ಫಲವು
ಕಲಿಯುಗದಿ ಗಾನದಲಿ ಕೇಶವಯೆನಲು
PøWä vÜÊ ÖÜ ÃÜWÜ sÜ .

# ಶ್ರೀ ವ್ಯಾಸ ತೀರ್ಥರು

ಶ್ರೀ ವ್ಯಾಸತೀರ್ಥರು ಶ್ರೀ ಪಾದರಾಯರ ಶಿಷ್ಯರು. ವ್ಯಾಸ ತೀರ್ಥರು ದಾಸ ಸಾಹಿತ್ಯದ ಇತಿಹಾಸದಲ್ಲಿ ವಿಶೇಷ ಸ್ಥಾನ ಪಡೆದಿದ್ದಾರೆ. ವಿಜಯನಗರದ ಕೃಷ್ಣದೇವರಾಯನಿಂದ ರಾಜ ಮರ್ಯಾದೆ ಸಂಪಾದಿಸಿದವರು. ದಾಸ ಸಾಹಿತ್ಯದ ಅಶ್ವಿನಿ ದೇವತೆಗಳಾದ ಕನಕ ಮತ್ತು ಪುರಂದರ ದಾಸರ ಗುರುಗಳು ' ಗುಣಕ್ಕೆ ಮತ್ಸರ ಉಂಟೇ ? ' ಎಂಬ ವಿಸಾಕ ಮನೋಭಾವವಿದ್ದ ವ್ಯಾಸತೀರ್ಥರು 'ದಾಸರೆಂದರೆ ಪುರಂದರ ದಾಸರಯ್ಯಾ ' ಎಂದು ತಮ್ಮ ಶಿಷ್ಯನ ಹಿರಿಮೆಯನ್ನು ಮುಕ್ತ ಕಂಠದಿಂದ ಪ್ರಶಂಶಿಸಿದ್ದಾರೆ.

ಯತಿರಾಜ ಎಂಬ ಮೂಲ ಹೆಸರಿನ ಶ್ರೀವ್ಯಾಸ ತೀರ್ಥರು ಬನ್ನೂರಿನಲ್ಲಿ ಜನಿಸಿ, ಚಿಕ್ಕಂದಿನಲ್ಲಿಯೇ ಅಗಾಧ ಪಾಂಡಿತ್ಯ, ಪ್ರತಿಭೆಯಿಂದ ಬ್ರಹ್ಮಣ್ಯತೀರ್ಥರಿಂದ ಸನ್ಯಾಸ ದೀಕ್ಷೆ ಪಡೆದರು. ವಿಜಯನಗರದ ಅರಸರಿಗೆ ಮಾರ್ಗದರ್ಶಕರಾಗಿದ್ದ ಇವರು ವಿಜಯನಗರದ ಚಕ್ರತೀರ್ಥದ ಎದುರಿಗೆ ಯಂತ್ರೋಸ್ಥಾರಕ ಮಾರುತಿಯ ಪ್ರತಿಷ್ಠಾಪನೆ ಮಾಡಿದ ಕಥೆಯು ಭಕ್ತಿಯ ನವಿರೇಳಿಸುವಂತಹದ್ದು.

ವ್ಯಾಸರಾಯರು ತಮ್ಮ ಕೀರ್ತನೆಗಳಿಗೆ ' ಶ್ರೀ ಕೃಷ್ಣ ' ಎಂಬ ಅಂಕಿತ ಇಟ್ಟಿದ್ದಾರೆ. ಇವರು ಸಾವಿರಾರು ಕೀರ್ತನೆಗಳನ್ನು ರಚಿಸಿದ್ದಾರೆಂಬ ಪ್ರತೀತಿ ಇದ್ದರೂ ಉಪಲಬ್ಧ ಕೀರ್ತನೆಗಳು ನೂರು ಮುಟ್ಟಿಲ್ಲ.

ಕೃಷ್ಣ ದೇವರಾಯನಿಗೆ ಮರಣ ಸಂಭವಿಸಿದ ಕಾರಣ ಅವನ ಆತ್ಮೀಯರಾಗಿದ್ದ ವ್ಯಾಸರಾಯರು ಜಿಗುಪ್ಸೆ ಹೊಂದಿ ಚಕ್ರತೀರ್ಥದ ಬಳಿ ಸಮಾಧಿಸ್ಥರಾಗಿರುತ್ತಿದ್ದ ಸ್ವಾಮಿಗಳು ಪುರಂದರದಾಸ ಕನಕದಾಸರೊಂದಿಗೆ ಪಾರಮಾರ್ಥಿಕದ ಮಾತುಗಳನ್ನು ಆಡುತ್ತಿದ್ದರಂತೆ. ಮುಂದೆ ದಿನನಿತ್ಯದ ಪೂಜೆ ಮುಗಿಸಿ ಕೀರ್ತನೆ ರಚಿಸುತ್ತ ಹಾಡುತ್ತಿರುವಾಗಲೇ ಪದ್ಮಾಸೀನರಾಗಿ "ನಾರಾಯಣ, ನಾರಾಯಣ" ಎಂದು ಗಟ್ಟಿಯಾಗಿ ಭಗವಂತನ ಸ್ಮರಣೆ ಮಾಡಿ ತಮ್ಮ ಶಿಷ್ಯರೆದುರೆ ಕಣ್ಣು ಮುಚ್ಚಿದ್ದರಂತೆ. ಹರಿದಾಸ ಸಾಹಿತ್ಯವೂ ವಿಜಯನಗರ ಸಾಮ್ರಾಜ್ಯವೂ ಏಕಕಾಲಕ್ಕೆ ಊರ್ಜಿತವಾದುದು ದೈವ ಸಂಕಲ್ಪ ಎನ್ನುತ್ತಾರೆ ಆಸ್ತಿಕರು.

## ವಾದಿರಾಜರು

ದಾಸ ಸಾಹಿತ್ಯ ರಚನೆಯಲ್ಲಿ ಪ್ರಮುಖವಾದ ವಾದಿರಾಜರು ಕನ್ನಡ , ಸಂಸ್ಕೃತ ಎರಡರಲ್ಲಿಯೂ ಗಂಥಗಳನ್ನು, ಕೀರ್ತನೆಗಳನ್ನು ರಚಿಸಿದರು. 'ಕನ್ನಡ ತಾತ್ಪರ್ಯ ನಿರ್ಣಯ', 'ಸ್ವಪ್ನಗದ್ಯ' ಅಲ್ಲದೆ ಸಾವಿರಾರು ದೇವರ ನಾಮ ರಚಿಸಿದ್ದಾರೆಂಬ ಪ್ರತೀತಿ ಇದೆ.

"ಗುರುಭಕುತಿ ಬೇಕು । ಹಿರಿಯರ ಕರುಣ ಬೇಕು ।
ಹರಿಕಥೆಗಳ ನಿತ್ಯ ಕೇಳುತಿರಬೇಕು ।"

ಎಂದು ಹೇಳಿರುವ ವಾದಿರಾಜರು ಉಡುಪಿಯ ಅಷ್ಟಮಠಗಳಲ್ಲಿ ಎರಡೆರಡು ವರ್ಷಗಳ ಪರ್ಯಾಯ ಪದ್ಧತಿಯನ್ನು ರೂಢಿಗೆ ತಂದರು. ಪೂಜಾ ಕಾಲದಲ್ಲಿ ಭಾಗವತ ಭಜನೆ ಪದ್ಧತಿಯನ್ನು ಎಲ್ಲಾ ಮಠಗಳಲ್ಲೂ ಜಾರಿಗೆ ತಂದು ಇಂದಿಗೂ ಇದೇ ಪರಿಪಾಠ ನಡೆದು ಬಂದಿದೆ. 24 ನುಡಿಗಳ 'ಲಕ್ಷ್ಮೀ ನಾರಾಯಣ ಜಯಲಕ್ಷ್ಮೀ ನಾರಾಯಣ' ಎಂಬ ಈ ಹಾಡಿನಲ್ಲಿ ಶ್ರೀ ಕೃಷ್ಣನ ಬಾಲಲೀಲೆಗಳನ್ನು ಆತನ ದುಷ್ಟಸಂಹಾರಕ ಮತ್ತು ಶಿಷ್ಟ ಪರಿಪಾಲನೆ ಕಾರ್ಯ ಬಣ್ಣಿಸಲಾಗಿದೆ.

ಇಂದಿಗೂ ಧರ್ಮಸ್ಥಳದಲ್ಲಿ ಚಾಲ್ತಿಯಲ್ಲಿರುವ ಅನ್ನದಾಸೋಹವನ್ನು ಜಾರಿಗೆ ತಂದವರು ವಾದಿರಾಜರೆ. ಮಹಾಭಾರತದ ತಾತ್ಪರ್ಯವನ್ನು ಕನ್ನಡ ವಚನಗಳನ್ನಾಗಿ ಬರೆದರು. ಮಧ್ವಾಚಾರ್ಯರ ಮೂಲ ಗ್ರಂಥಗಳನ್ನು ಕನ್ನಡ ಗೀತರೂಪವಾಗಿ ಅನುವಾದಿಸಿದರು. ಇವಲ್ಲದೆ ಭಾಗವತ , ಪಂಚರಾತ್ರಾಗಮ ಮತ್ತು ಶೃತಿ ಪ್ರಮಾಣವನ್ನು ಕನ್ನಡ ನುಡಿಗಳನ್ನಾಗಿ ಮಾಡಿದ್ದಾರೆ. ಲಕ್ಷ್ಮೀ ಶೋಭಾನೆಯ ನೂರೆಂಟು ನುಡಿ ರಚಿಸಿದ್ದಾರೆ.

## ಪುರಂದರದಾಸರು

ದಾಸರೆಂದರೆ ಪುರಂದರದಾಸರಯ್ಯಾ - ಎಂದು ತನ್ನ ಗುರುಗಳಿಂದಲೇ ಮನ್ನಣೆ ಪಡೆದ ಪುರಂದರದಾಸರು ದಾಸಸಾಹಿತ್ಯವನ್ನು ಬೆಳೆಸಿದ ಮಹಾಸಾಧಕರು. ಪುರಂದರರು ಅನ್ನಮಾರ್ಯನ ಕೀರ್ತನೆಗಳನ್ನು ಅನುಸರಿಸಿ ಕನ್ನಡದಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದರು ಎಂದು ಅನ್ನಮಾರ್ಯ ಚರಿತ ಉಪೋದ್ಘಾತದಲ್ಲಿ ಹೇಳಲಾಗಿದೆ. ಇವರ ಕಾಲ ಕ್ರಿ.ಶ 1480 - 1565 ಎಂದು ಗುರುತಿಸಲಾಗಿದೆ. ಆಗಾಗಿ ಅನ್ನಮಯ್ಯ ನಿಗೂ ಪುರಂದರರಿಗೂ ಸಂಬಂಧ ಕಲ್ಪಿಸುವುದು ಸಲ್ಲ.

ಸ್ವತ: ಪುರಂದರಿಂದ ರಚಿಸಿಲ್ಪಟ್ಟ ಹಲವಾರು ಕೀರ್ತನೆಗಳು ದಾಸರ ಜೀವನದ ಬಗ್ಗೆ ಒಂದೊಂದು ಇಣುಕು ನೋಟ ಬೀರುತ್ತವೆ. ಪುರಂದರರನ್ನು ಕುರಿತ 'ಮುತ್ತಿನ ಮೂಗುತಿ' ಪ್ರಸಂಗ ಕಟ್ಟುಕತೆ , ಹಾಗೆ ಮಹಾರಾಷ್ಟ್ರದ ಪುರಂದರಗಡ ಇವರ ಜನ್ಮಸ್ಥಳ ಎನ್ನಲಾಗದು. ಮಲೆನಾಡಿನ ಕ್ಷೇಮಪುರವೇ ಪುರಂದರರ ಹುಟ್ಟೂರಿರಬಹುದು. ಇನ್ನು ಕೆಲವರು ಹೈದರಾಬಾದಿನ ಸಂಸ್ಥಾನದ ಬಳಿ ಜನಿಸಿರಬಹುದು ಎನ್ನುತ್ತಾರೆ.

'ಗಿಳಿಯು ಪಂಜರದೊಳಿಲ್ಲ', ಯಾಕೆನ್ನ ಈ ರಾಜ್ಯಕ್ಕೆನ್ನ ಇಳಿತಂದೆ ಹರಿಯೆ', 'ಬಾರವ್ವಾ ಭಾಗೀರಥಿ', ಅಪಮಾನವಾದರೆ ಒಳಿತು' , 'ನಮ್ಮ ಭಾಗ್ಯ ದೊಡ್ಡದೊ ನಿಮ್ಮ ಭಾಗ್ಯ ದೊಡ್ಡದೊ' ಈ ಕೀರ್ತನೆಗಳಲ್ಲಿ ಆತ್ಮಾನುಭೂತಿ ಅಂಶವಿದೆ. ಪುರಂದರರು ಸಿರಿವಂತ ಬದುಕು ಮಾಡಿದರೂ ಸ್ವ

ಇಚ್ಛೆಯಿಂದ ಬಡವರಾದವರು. 'ಋಣವೆಂಬ ಸೂತಕವು ಬಾಧೆ ಪಡಿಸುತಿದೆ' ಎಂದು ಬರೆದವರು.

ಪುರಂದರರ ಕೀರ್ತನೆಗಳಲ್ಲಿ ಭಕ್ತಿಯ ಪಾರಮ್ಯ, ತೀರ್ಥಸ್ಥಳಗಳು , ಕ್ಷೇತ್ರಗಳ ವರ್ಣನೆ, ತನ್ನ ಕಾಲದ, ಸಾಮಾಜದ ಮೂಢನಂಬಿಕೆ, ಆಡಂಬರ, ಅಂಧಶ್ರದ್ಧೆಯನ್ನು ಬಯಲಿಗೆಳೆದರು. 'ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ' ಎಂದು ಮೂದಲಿಸಿ, 'ಮಡಿ ಮಡಿ ಎಂದು ಅಡಿಗಡಿಗೆ ಹಾರುವೆ', 'ಈಸಬೇಕು ಇದ್ದು ಜೈಸಬೇಕು', 'ಕಲ್ಲಾಗಿರಬೇಕು ಕಠಿಣ ಭವ ತೊರೆಯೊಳಗೆ', 'ಅಂಬಿಗ ನಾ ನಿನ್ನ ನಂಬಿದೆ' - ಹೀಗೆ ಕರ್ನಾಟಕ ಸಂಗೀತಕ್ಕೊ, ಕನ್ನಡ ಸಾಹಿತ್ಯಾಕ್ಕೊ, ಪುರಂದರದಾಸರ ಕೊಡುಗೆ ಅಪಾರ. ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿರುವೆನೆಂದು ಹೇಳಿ ಕೊಂಡಿದ್ದರೂ ಸದ್ಯಕ್ಕೆ ಸಾವಿರದಷ್ಟು ಸಿಕ್ಕಿವೆ.

## ಕನಕದಾಸರು

ಧಾರವಾಡ ಜಿಲ್ಲೆಯ ಬಾಡ ಗ್ರಾಮದಲ್ಲಿ ಜನಿಸಿದ ಕನಕನಾಯಕರು ವಿಜಯನಗರದ ಸಾಮ್ರಾಜ್ಯದ ದಂಡ ನಾಯಕರಾಗಿ, ಶ್ರೀಮಂತರಾಗಿದ್ದು ಇದ್ದಕ್ಕಿದಂತೆ ವೈರಾಗ್ಯ ಬಂದು ಇಲ್ಲವೇ ಮಾರಣಾಂತಿಕ ಹಲ್ಲೆಗೊಳಗಾಗಿ ಹಿಂಸೆಯ ಕಹಿಯ ಅರಿವಾಗಿ ದಾಸನಾಗಿ ಊರೂರು ತಿರುಗುತ್ತಾ ಉಡುಪಿಗೆ ಬಂದು ಆದಿಕೇಶವನ ದರ್ಶನ ಪಡೆದು ಆತನ ಹೆಸರಿನಲ್ಲಿ ಕೀರ್ತನೆ ಕಟ್ಟಿ ಹಾಡುತ್ತಾ ಕಾಗಿನೆಲೆಯಲ್ಲಿ ನೆಲೆಸಿದರು. ಕನಕನ ಕಿಂಡಿ ಪ್ರಸಂಗ ಅಜರಾಮರ.

ವಿಪುಲವಾದ ಲೋಕಾನುಭವ, ದೃಢಭಕ್ತಿ, ಸಮಾಜ ವಿಡಂಬನೆ, ಆತ್ಮ ವಿಮರ್ಶೆ ಇವು ಸಾಮಾನ್ಯವಾಗಿ ಕನಕದಾಸರ ಕೀರ್ತನೆಗಳಲ್ಲಿ ಕಾಣುತ್ತೇವೆ. 'ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ', 'ತಲ್ಲಣಿಸದಿರು ಕಂಡ್ಯಾ ತಾಳು ಮನವೇ', 'ಬುದಕಿದೆನು ಬದುಕಿದೆನು ಭವವೆನಗೆ ಹಿಂಗಿತು' - ಇತ್ಯಾದಿ ಕೀರ್ತನೆಗಳಲ್ಲದೆ ಹರಿಭಕ್ತಿಸಾರ, ರಾಮಧಾನ್ಯಚರಿತೆ, ಮೋಹನ ತರಂಗಿಣಿ, ನಳಚರಿತ್ರೆ, ನರಸಿಂಹ ಸ್ತವ ಎಂಬ ಕಾವ್ಯಗಳನ್ನು ರಚಿಸಿರುವರು.

ಹೀಗೆ ಕನಕದಾಸರು ಬದುಕು, ಬರಹ ಭಕ್ತಿಯಿಂದ ದಾಸನ ಕುಲ ಬೆಳೆಯಿತು. ಪುರಂದರದಾಸ ಮತ್ತು ಕನಕದಾಸರಿಬ್ಬರೂ ವ್ಯಾಸತೀರ್ಥರು ಕೈಗೊಂಡ ಕೆಲಸಗಳನ್ನು ಅವರ ಎರಡು ಭುಜಗಳಂತೆ ನಿಂತು ನಡೆಸಿ ಕನ್ನಡ ಸಂಸ್ಕೃತಿ ಅರಳಲು ಇವರಿಬ್ಬರು ನೀಡಿದ ನೆರವು ಮರೆಯಲಾಗದಂಥದು. ನಂತರ ವಿಜಯದಾಸರು, ಗೋಪಾಲದಾಸರು, ರಾಘವೇಂದ್ರ ಸ್ವಾಮಿಗಳು, ಹೆಳವನಕಟ್ಟೆ ಗಿರಿಯಮ್ಮ ಮತ್ತಿತರರು ದಾಸ ಪಂಥವನ್ನು ಮುಂದುವರಿಸಿದರು. ಕ್ರಮೇಣ ಇಳಿಮುಖವಾಯಿತು.

ಆದರೆ ಒಂದು ಕಾಲದಲ್ಲಿ ನಮ್ಮ ನಾಡಿನ ಹಿರಿಯರು ಬೆಳೆಸಿದ ಭಕ್ತಿಪಂಥ, ಅದರಿಂದ ಹೊರ ಹೊಮ್ಮಿದ ಅಪೂರ್ವ ಸಾಹಿತ್ಯ ಎರಡೂ ಕನ್ನಡ ನಾಡಿಗೆ, ಸಂಸ್ಕೃತಿಗೆ ಬಲವನ್ನು, ತೇಜಸ್ಸನ್ನು ಒದಗಿಸಿದವು ಎನ್ನುವುದು ಹೆಮ್ಮೆಯ, ಸಮಾಧಾನದ ಸಂಗತಿ.

★★★

# ಭಕ್ತಿ ಮತ್ತು ಪುರೋಹಿತಶಾಹಿಗಳ ನಡುವಣ ವ್ಯತ್ಯಾಸಗಳ ಪರಿಶೀಲನೆ

ಭಗವಂತನ ಅನುಗ್ರಹವಿಲ್ಲದೆ ತೃಣವೂ ಅಲುಗುವುದಿಲ್ಲ ವೆಂದು ಭಾವಿಸಿದದಂದಿನಿಂದ, ಜಗತ್ತಿನ ಸಕಲ ಜೀವರಾಶಿಗಳಿಗೂ ಕಾಲಕಾಲಕ್ಕೆ ಹೊಟ್ಟೆ ತುಂಬಿಸುವ ಹೊಣೆ ಆತನದು ಎಂಬ ಭಾವ ಬಲಿತಂದಿನಿಂದ ಉಂಟಾದ ಕೃತಾರ್ಥಭಾವವೇ ಭಕ್ತಿ. ಜನಪದರು ಪ್ರಕೃತಿಯ ಚರಾ - ಚರ ವಸ್ತುಗಳಲ್ಲೂ ಭಗವಂತನನ್ನು ಕಂಡರೆ, ವಚನಕಾರರಿಗೆ ಅದು ಶಿವಮಯ ! ಅಂತೆಯೇ ಶರಣರ ಹಾದಿಯಲ್ಲಿ ನಡೆದ ಕೀರ್ತನಕಾರರಿಗೆ , ದಾಸನ ಕುಲದವರಿಗೆ ಅದು ವಿಷ್ಣುಮಯ ! ಒಟ್ಟಿನ'ಲ್ಲಿ ಧರ್ಮಗಳ ಬಿಗಿ ಹಿಡಿತ ಮತ್ತು ಮತೀಯವಾದಗಳ ವಿಜೃಂಭಣೆಗೆ ವಿರುದ್ದವಾಗಿ ಮೂಡಿ ಬಂದುದೆ ಭಕ್ತಿಪಂಥ ಎನ್ನಬಹುದು.

ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ರಚನೆಯಾಗಿದ್ದು ಶೂದ್ರ ಸಂಸ್ಕೃತಿಯವರಿಂದ ಎಂಬುದನ್ನು ಅವಲೋಕಿಸಿದರೆ ಹಿಂದಿನಿಂದಲೂ ನಮ್ಮ ದೇಶದಲ್ಲಿ ಜಾತಿ, ಧರ್ಮ, ಮತ ಇವುಗಳ ಪರಿಕಲ್ಪನೆ ಅಷ್ಟಾಗಿ ಇರಲಿಲ್ಲ ವೆಂಬುದು ಸಮಾಜ ಶಾಸ್ತ್ರದ ಅಧ್ಯಯನದಿಂದ ತಿಳಿದು ಬರುತ್ತದೆ. ಇದಕ್ಕೆ ಭಗವದ್ಗೀತೆಯಲ್ಲಿ ಕೃಷ್ಣನು ಹೇಳುವ ಮಾತೇ ಸಾಕ್ಷಿ. ಶ್ರೀ ಕೃಷ್ಣನು ಭಕ್ತಿಯಿಂದ ಆರಾಧಿಸುವವರಿಗೆ ತಾನು ಉದ್ದರಿಸುವ ಮಾತು ಆಡುತ್ತಾನೆಯೇ ವಿನಾ : ಜಾತಿ ಧರ್ಮದ ಪ್ರಸ್ತಾಪವಲ್ಲ.

ಅಂದರೆ ನಮ್ಮ ದೇಶಕ್ಕೆ ಮಧ್ಯ ಏಷ್ಯಾದಿಂದ ಆರ್ಯರು ವಲಸೆ ಬಂದು ಇಲ್ಲಿನ ದ್ರಾವಿಡರನ್ನು ತಮ್ಮ ವರ್ಣ, ಬುದ್ದಿವಂತಿಕೆಯಿಂದ ಗಮನಸೆಳೆದು, ಅವರನ್ನು ಸದಾ ಹಿಡಿತದಲ್ಲಿ ಇಟ್ಟುಕೊಳ್ಳುವ ಸಲುವಾಗಿ ಅಧಿಕಾರ ಶಾಹಿಯಾದ ರಾಜರೊಂದಿಗೆ ಸೇರಿ ತಮ್ಮ ಹಿತಾಸಕ್ತಿ ರಕ್ಷಿಸಿಕೊಳ್ಳಲು ವೇದ, ಉಪನಿಷತ್ತು, ಅರಣ್ಯಕಗಳು, ಬ್ರಾಹ್ಮಣ (ಜಾತಿಯಲ್ಲ) ಕ ಗಳನ್ನು ರಚಿಸಿ ವರ್ಣಾಶ್ರಮ ಮತ್ತು ಚತುರ್ವರ್ಣಗಳನ್ನು ರಚಿಸಿ ಜಾತೀಯತೆ ಯನ್ನು ಹುಟ್ಟು ಹಾಕಿದರು. "ಸೃಷ್ಟಿಕರ್ತನಾದ ಬ್ರಹ್ಮನ ಮುಖದಿಂದ ಬ್ರಾಹ್ಮಣರು , ತೋಳುಗಳಿಂದ ಕ್ಷತ್ರಿಯರು, ಎದೆಯಿಂದ ವೈಶ್ಯರು ಜನಿಸಿದರೆ ಶೂದ್ರರು ಆತನ ಪಾದಗಳಿಂದ ಉದ್ಭವಿಸಿದರು. ಆದ್ದರಿಂದ ಬ್ರಾಹ್ಮಣರು ವೇದಾಧ್ಯಯನ, ಉಪನ್ಯಾಸ, ಯಜ್ಞ ಯಾಗಗಳಿಂದಲೂ, ಕ್ಷತ್ರಿಯರು ರಾಜ್ಯ ಪರಿಪಾಲನೆಯಿಂದಲೂ, ವೈಶ್ಯರು ವ್ಯಾಪಾರ ವಹಿವಾಟುಗಳನ್ನು ಮಾಡಿದರೆ ಶೂದ್ರರು ಮೇಲಿನ ಮೂರು ವರ್ಗದವರ ಸೇವೆಯನ್ನು ಪ್ರಾಮಾಣಿಕವಾಗಿ ಮಾಡಿ ಮುಕ್ತಿ ಸಂಪಾದಿಸಬೇಕು" - ಎಂದು ಶಾಸನ ಬರೆದು, ರಾಜನಿಂದ ಆಜ್ಞೆ ಹೊರಡಿಸಿ ವಿವಾಹ, ವೃತ್ತಿ, ಧರ್ಮ, ಜಾತಿ, ಸಂಸ್ಕೃತಿ , ವಿದ್ಯೆ, ದೇವರು, ನಂಬಿಕೆ, ಸಂಪ್ರದಾಯ, ಸಮಾಜ ಹೀಗೆ ಎಲ್ಲದರ ಮೇಲೂ ತಮ್ಮ ಹಿಡಿತ ಸಾಧಿಸಿದರು. ಅದರ ಪರಿಣಾಮವೇ ಪುರೋಹಿತ ಸಾಹಿತ್ಯ ಸೃಷ್ಟಿ.

# ಭಕ್ತಿ ಮತ್ತು ಪುರೋಹಿತ ಶಾಹಿಗಳ ನಡುವಿನ ವ್ಯತ್ಯಾಸ

ಸಮಾಜದ ವಿವಿಧ ವರ್ಗ, ಜಾತಿ, ವೃತ್ತಿ, ಅದರಲ್ಲೂ ಸ್ತ್ರೀಯರು ಮುಖ್ಯವಾಹಿನಿಗೆ ಬಂದು ಸಾಹಿತ್ಯ ರಚನೆಯಲ್ಲಿ ತೊಡಗಿದುದು ವಚನ ಸಾಹಿತ್ಯದ ವೈಶಿಷ್ಟ್ಯ. ಅದೊಂದು ಚಳುವಳಿ. ಹಿಂದಿನಿಂದಲೂ ನಡೆದು ಬಂದ ಪರಂಪರೆಯನ್ನು ಧಿಕ್ಕರಿಸಿ ಸಾಹಿತ್ಯಕ್ಕೆ ತಮ್ಮ ವಿಚಾರ ಶಕ್ತಿಯಿಂದ ಹೊಸ ಭಾಷ್ಯ ಬರೆದ ಕ್ರಾಂತಿಕಾರರು ವಚನ ಸಾಹಿತಿಗಳು. ವೇದ, ಉಪನಿಷತ್ತು, ಶಾಸ್ತ್ರಗಳಿಂದ ತಾರತಮ್ಯದಿಂದ ಕೂಡಿದ್ದ ಮಾನವ ಸಮಾಜವನ್ನು ತಮ್ಮ ಧೀ:ಶಕ್ತಿಯಿಂದ ಮೇಲೆತ್ತಿ ಪುನರಾವಲೋಕನ ಮಾಡಿದರು. ಒಂದು ಜಾತಿಯವರಿಗೆ ಮೀಸಲಾಗಿದ್ದ ದೇವರು ಮತ್ತು ಧರ್ಮವನ್ನು ಮೇಲ್ವರ್ಗದ ಕಪಿಮುಷ್ಠಿಯಿಂದ ಬಿಡಿಸಿ ಸಾರ್ವತ್ರಿಕಗೊಳಿಸಿದರು : ಸಾರ್ವಜನಿಕಗೊಳಿಸಿದರು.

ದೇವರಿಗೆ ಬೇಕಿರುವುದು ನಿರ್ಮಲ ಭಕ್ತಿ, ಶ್ರದ್ಧೆಯೇ ಹೊರತು ಜಾತಿಯಲ್ಲ. ನಾವೆಲ್ಲ ಅವನ ಸೃಷ್ಠಿ ಎಂದ ಮೇಲೆ ಮೇಲು - ಕೀಳು ಅರ್ಥನದಲ್ಲ. "ಕಂದನಲ್ಲಿ ಕುಂದನರಸುವರೆ"? ಎಂದು ಪ್ರಶ್ನಿಸಿ ಮೌಢ್ಯಗಳಿಗೆ ಮರ್ಮಾಘಾತ ನೀಡಿದರು. ರಾಜಾಶ್ರಯದಲ್ಲಿದ್ದು 'ಆರಂಕುಶವಿಟ್ಟೊಡಂ ನೆನವುದೆನ್ನ ಮನಂ ಬನವಾಸಿ ದೇಸಮಂ' ಎಂದು ಸ್ವತಂತ್ರ ಪ್ರಜ್ಞೆ ಮೆರೆದ ಆದಿಕವಿ ಪಂಪ ಹೇಳಿದ ಮನುಷ್ಯ ಜಾತಿ ತಾನೊಂದೆ ವಲಂ ಎಂಬ ಮಾತು ಮಹತ್ವ ಪೂರ್ಣವಾಯಿತು.

ದೇವರ ಹೆಸರಿನಲ್ಲಿ, ಯಜ್ಞ ಯಾಗಗಳಿಗೆ ನೀಡುತ್ತಿದ್ದ ಪ್ರಾಣಿ ಬಲಿಯನ್ನು ಖಂಡಿಸಿದ ಆದ್ಯ ವಚನಕಾರ ದಾಸಿಮಯ್ಯ "ಸತಿಯರ ಸಂಗವನು ಅತಿಶಯದ ಗ್ರಾಸವನು, ಅರಿವುಳ್ಳಡೆ ಹೆರರ ಕೈಯಿಂದ ಮಾಡಿಸುವರೆ"? ಎಂದು ಖಾರವಾಗಿ ಪ್ರಶ್ನಿಸಿ ಆತ್ಮ ವಿಶ್ವಾಸ ತುಂಬಿದನು. ಮಾರಿಯ ಪೂಜೆಯ ನೆಪದಲ್ಲಿ ಮುಗ್ಧ ಪ್ರಾಣಿ ಕುರಿಯನ್ನು ಕೊಯ್ದುಂಬ ಕ್ರೂರಿಗಳಿಗೆ ನರಕ ತಪ್ಪದು ಎಂದು ಎಚ್ಚರಿಸಿದನು.

ರಾಜಾಶ್ರಯದಲ್ಲೋ, ಸಿರಿವಂತರ ನೆರಳಲ್ಲೋ, ಬದುಕುತ್ತಾ ಅವರನ್ನು ತೃಪ್ತಿಗೊಳಿಸಲು ಆಗಾಗ ಹಸಿಸುಳ್ಳು ಹೇಳುತ್ತಾ, ಪೂಜೆ ನೈವೇದ್ಯದ ಹೆಸರಿಲ್ಲಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ ಜನರನ್ನು ಕಂಡು ಜಿಗುಪ್ಸೆ ಪಟ್ಟು ಎಲ್ಲವೂ ಶಿವದಾನ ಅದನುಂಡು ಅನ್ಯರನ್ನು, ಜನರನ್ನು, ಹೊಗಳುವವರು 'ಕುನ್ನಿ' ಗಳೆಂದರು.

ಕರ್ಮಸಿದ್ಧಾಂತವನ್ನು ಪ್ರತಿಪಾದಿಸಿದ ಪುರೋಹಿತ ಸಾಹಿತ್ಯವನ್ನು ವಿರೋಧಿಸುತ್ತಾ 'ಹಸಿವಿಗನ್ನವ ನಿಕ್ಕಿದವನೆ ಗಾರುಡಿಗ !' ನೆಂದು ಶ್ಲಾಘಿಸಿ ಜಪ ತಪಗಳ ವ್ಯರ್ಥಾಲಾಪವನ್ನು ಖಂಡಿಸಿದರು. ಕ್ರಾಂತಿಯೋಗಿ ಬಸವಣ್ಣನವರಂತೂ ಪ್ರಾಣಿವಧೆಯನ್ನು ಖಂಡಿಸಿ ವೀರಶೈವ ಮತಾವಲಂಬಿಯಾದವರು ಸಕಲ ಜೀವಾತ್ಮಗಳಿಗೂ ಲೇಸನ್ನು ಬಯಸವವನು ಮಾತ್ರ ಶರಣ ಎಂದು ಬಗೆದವರು.

ಹಬ್ಬ ಪೂಜೆಯ ಹೆಸರಲ್ಲಿ ಮೂಕ ಪ್ರಾಣಿಗಳ ಬಲಿ ವಿರೋಧಿಸಿ 'ಕೊಂದವರುಳಿದರೆ'? ಎಂದು ಪ್ರಶ್ನಿಸಿದರು. 'ವೇದವನೋದಿದವರ ಮುಂದೆ ಅಳು ಕಂಡೆಯಾ' - ಎಂದು ಸಂಕಟ

ತೋಡಿಕೊಂಡು ಮೊಲಕ್ಕಿಂತ ಕರಕಷ್ಟನರನ ಬಾಳುವೆ ಎಂದು ತಿಳಿಸಿ ಕೂಡಲ ಸಂಗಮದೇವನನ್ನು ಸ್ಮರಿಸುವಂತೆ ಎಚ್ಚರಿಸಿದರು.

ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಗೌತಮ ಮುನಿಗೆ ಗೋವಧೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಬಲಿಗೆ ಬಂಧನವಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಕರ್ಣನ ಕವಚ ಹೋಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ದಕ್ಷಂಗೆ ಕುರಿದಲೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಪರಶುರಾಮನು ಸಮುದ್ರಕ್ಕೆ ಗುರಿಯಾದನು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ನಾಗಾರ್ಜುನನ ತಲೆ ಹೋಯಿತ್ತು.
ದೇವಾ ಭಕ್ತನೆಂದು ನಂಬಿದ ಕಾರಣ
ನಮ್ಮ ಕೂಡಲ ಸಂಗನ ಶರಣರು ಕೈಲಾಸವಾಸಿಗಳಾದರು.

ಎಂದು ನೇರವಾಗಿ ವಾಕ್ಸಮರಕ್ಕೆ ನಾಂದಿ ಹಾಡಿದವರು ಬಸವಣ್ಣ. ಬ್ರಾಹ್ಮಣನೆಂದರೆ ಜಾತಿ ಸೂಚಕ ವೆಂಬ ಸಂಕುಚಿತ ಅರ್ಥ ತಿಳಿಯದೆ ಪುರೋಹಿತ ಶಾಹಿ ಎಂದು ವಿಶಾಲಾರ್ಥದಿಂದ ಲಕ್ಷಿಸಬೇಕು.

ಹೀಗೆ ಕಾಸಿ ಕಮ್ಮರನಾದ; ಬೀಸಿ ಮಡಿವಾಳನಾದ – ಎಂದು ವೃತ್ತಿಯೇ ಜಾತಿಗಾಧಾರವಯಿತು ಎಂದು ತಿಳಿಸುತ್ತಾ ಹೊಲೆತನ ವೆಂಬುದು ಜಾತಿಸೂಚಕವಲ್ಲ ' ಗುಣವಾಚಕ ' ಎಂಬ ವಿಶಿಷ್ಟಾರ್ಥ ತಂದವರು ಬಸವಣ್ಣ.

' ನಸ್ತ್ರೀ ಸ್ವಾತಂತ್ರ್ಯಮರ್ಹತಿ ' – ಎಂದ ಮನುಶಾಸ್ತ್ರವನ್ನು ವಿರೋಧಿಸಿದ ವಚನಕಾರರು ಬಾಹ್ಯಲಕ್ಷಣಗಳಿಂದಾಗಿ ಹೆಣ್ಣು – ಗಂಡೆಂಬ ಗುರುತು ಅಷ್ಟೆ, ಆದರೆ ಆತ್ಮಕ್ಕೆ ಯಾವ ಕುಲ ಎಂದು ಪ್ರಶ್ನಿಸಿ ನಿಡಿದೊಂದು ಕೋಲನು ಕಡಿದು ಎರಡು ಮಾಡಿ ಹೊಸದಡೆ ಹುಟ್ಟಿದ ಕಿಚ್ಚು ಹೆಣ್ಣೋ – ಗಂಡೋ ? ಎಂದು ದಾಸಿಮಯ್ಯ ಪ್ರಶ್ನಿಸಿ ಸಮಾನತೆಯ ತತ್ವ ಸಾರಿದರು.

ತಮ್ಮ ಭಕ್ತಿ ಪಂಥದ ಮೂಲಕ ದಾಸ ಸಾಹಿತ್ಯ ಸೃಷ್ಟಿಸಿ, ತಾಳ – ತಂಬೂರಿ ಹಿಡಿದು ಬೀದಿ – ಬೀದಿಯಲ್ಲಿ ತಿರುಗುತ್ತಾ ಭಗವಂತನ ಲೀಲಾ – ವಿನೋದಗಳನ್ನು ಕೇಳುಗರ ಕಣ್ಣಿಗೆ ಕಟ್ಟುವಂತೆ ಬಣ್ಣಿಸುತ್ತಾ ಹಾಡಿ ನಲಿದ ಕೀರ್ತನಾಕಾರರು ತಮ್ಮ ಭಕ್ತಿ ರಸಗಂಗೆಯನ್ನು ಹರಿಯಬಿಟ್ಟಂತೆ, ಪುರೋಹಿತಶಾಹಿ ವ್ಯವಸ್ಥೆಯನ್ನು ವಿಡಂಬಿಸಿದ್ದಾರೆ.

‘ ಹರಿದಾಸ ಸಾಹಿತ್ಯದ ಪಿತಾಮಹ ’ ರಾದ ಶ್ರೀಪಾದರಾಜರು ಒಂದು ವರ್ಗಕ್ಕೆ ಮಾತ್ರ ಮೀಸಲಾಗಿದ್ದ ಸಂಸ್ಕೃತ ಭಾಷೆಯ ಅಪಾರ ಪಾಂಡಿತ್ಯವಿದ್ದು, ಜನಸಾಮಾನ್ಯರ ಆಡು ಭಾಷೆಯಲ್ಲಿ ಕೀರ್ತನೆ ರಚಿಸಿ, ಭಾಗವತ ಪರಂಪರೆಯಲ್ಲಿ ಹಾಡುವ ಸಂಪ್ರದಾಯ ಹುಟ್ಟುಹಾಕಿ ಅದೆಷ್ಟೇ ವಿರೋಧ ಬಂದರೂ ಲೆಕ್ಕಿಸದೆ ಜನಭಾಷೆ ಕನ್ನಡದ ಸರಳ ಭಾಷೆಯ ಮೂಲಕ ದಾಸಸಾಹಿತ್ಯ ಬೆಳೆಸಿ ಪುರೋಹಿತ ಶಾಹಿ ವ್ಯವಸ್ಥೆಗೆ ಬಲವಾದ ಕೊಡಲಿ ಪೆಟ್ಟು ನೀಡಿದರು ! ವಾದಿರಾಜರು ‘ ವೇದ ಶಾಸ್ತ್ರ ನೋಡಿದರೇನು ? ಸಾಧನಕಿದು ನಿರ್ಧಾರ ’ -ಎಂದರು.

ಸಂತಕವಿ ಕನಕದಾಸರಂತೂ ವಿದ್ವಾಂಸರ ‘ಅನ್ನದ’ ಪ್ರೀತಿಯನ್ನು ವಿಶ್ಲೇಷಿಸಿ, ಸಾಮಾನ್ಯರ, ಕಡು ಬಡವರ , ಪೌಷ್ಟಿಕ ಆಹಾರವಾದ ‘ರಾಗಿ’ ಯನ್ನು ಬೆಂಬಲಿಸಿ , ಪ್ರಶಂಶಿಸಿ ತ್ರೇತಾಯುಗದ ರಾಮನಿಗೂ ಇದರ ಮೇಲೆ ಪ್ರೀತಿ ಇತ್ತು ಎಂಬ ಅದ್ಭುತ ಕಲ್ಪನೆ ನೀಡಿ ‘ರಾಮಧಾನ್ಯ ಚರಿತೆ’ ಎಂಬ ಕಾವ್ಯ ರಚಿಸಿ ‘ಮುದ್ದೆ’ ಯೆಂದು ಮೂಗು ಮುರಿಯುತ್ತಿದ್ದ ಮೇಲ್ವರ್ಗದವರಿಗೆ ಮುಖದ ನೀರಿಳಿಸಿ, ತುಳಿತಕ್ಕೊಳಗಾದವರಿಗೆ ‘ತಲ್ಲಣಿಸದಿರು ಕಂಡ್ಯಾ ತಾಳು ಮನವೇ! ಎಲ್ಲರನು ಸಲಹವನು ಇದಕೆ ಸಂಶಯ ಬೇಡ’ - ಎಂದು ಭರವಸೆ ಹುಟ್ಟಿಸಿ, ಸಂತಸ ನೀಡಿದರು.

ಉದರ ನಿಮಿತ್ತಂ ಬಹು ಕೃತ ವೇಷಂ ಎನ್ನುವಂತೆ ಎಲ್ಲಾರು ಮಾಡುವುದು ಹೊಟ್ಟೆಗಾಗಿ - ಗೇಣು ಬಟ್ಟೆಗಾಗಿ ಎಂದು ಹೇಳಿ ಯಾವ ವೃತ್ತಿಯು ಶ್ರೇಷ್ಠವಲ್ಲ; ಕನಿಷ್ಟವೂ ಅಲ್ಲ. ಅದರ ಉದ್ದೇಶ ತುತ್ತಿನ ಚೀಲ ತುಂಬಿಸುವುದಷ್ಟೇ ಎಂದು ಹೇಳಿ -

ವೇದ ಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
ಭೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮ ಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ.

ವ್ಯತ್ಯಾಸವೇನಿಲ್ಲ! ಉದ್ದೇಶ ಒಂದೇ ಎಂದು ಸಾರಿ ಉನ್ನತಾದಿನೆಲೆ ಕೇಶವ ರಾಯನ ಅನುದಿನ ನೆನೆವುದು ಮಾತ್ರ ಮುಕ್ತಿಗಾಗಿ ಎಂದು ಸ್ಪಷ್ಟಪಡಿಸಿದರು. ಉಳಿದ ನಳಚರಿತ್ರೆ, ಹರಿಭಕ್ತಿಸಾರ, ಮೋಹನ ತರಂಗಿಣಿ ಯಲ್ಲಿ ಭಗವನ್ನಾಮ ಸ್ಮರಣೆ ಮಾಡಿದ್ದಾರೆ. ತನಗೆ ಪ್ರವೇಶ ನಿರಾಕರಿಸಿದ ಉಡುಪಿ ದೇಗುಲದ ಕೃಷ್ಣನ ದಿಕ್ಕನೆ ಬದಲಿಸಿದರೆಂಬ ಪ್ರತೀತಿ ಇದೆ.

ಕನಕದಾಸರ ಓರಗೆಯವರಾದ ಪುರಂದರದಾಸರು ಕೂಡ ತೋರ್ಪಡಿಕೆಯ ಪುರೋಹಿತ ಶಾಹಿಯನ್ನು ಕೆದಕಿದ್ದಾರೆ. ಕನಕದಾಸರು ‘ ಕುಲ ಕುಲವೆಂದು ಹೊಡೆದಾಡದಿರಿ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ’ ? ಎಂದು ಪ್ರಶ್ನಿಸುತ್ತಾ ಮತ್ತೆ “ಆತ್ಮಯಾವ ಕುಲ , ಜೀವ ಯಾವ ಕುಲ, ತತ್ವೇಂದ್ರಿಯಗಳ ಕುಲವಾವುದು ಪೇಳಿರಣ್ಣ” ? ಎಂದು ಹೇಳಿ ಆದಿಕೇಶವನೊಲಿದ ಮೇಲೆ ಯಾತರ ಕುಲವಯ್ಯ ? ಎಂದವರು. ತಮ್ಮ ಜನ್ಮವೇ, ಜೀವನವೇ ಶ್ರೇಷ್ಠ ಎಂದು ಬೀಗುತ್ತಿದ್ದವರಿಗೆ ಪುರಂದರದಾಸರು “ ತಗ್ಗುವ, ಬಗ್ಗುವ, ನುಗ್ಗುವ, ಕಡೆಗೆ ಅಗ್ನಿಯೊಳಗೆ ಬಿದ್ದು ಧಗ್ಧವಾಗುವ ಈ ದೇಹಕೆ ಹಿಗ್ಗುವೆ ಯಾಕೋ ಮನುಜ ” ಎಂದು ಕೇಳಿದರು. ಮಡಿ ಮಡಿ ಎಂದು ಮೂರು ಮೈಲಿ

ಹಾರುತ್ತಾ ಕೆಳಜಾತಿಯವರ ನೆರಳು ಸೋಕಿದರೆ ಹೊಲೆಯಾಯಿತೆಂದು ಭಾವಿಸುತ್ತಿದ್ದ ಪುರೋಹಿತರಿಗೆ " ನವದ್ವಾರದ ಹೊಲೆಯಲ್ಲಿ ನರಳುತ್ತಿದ್ದಾಗ ಎಲ್ಲಿತ್ತು ಈ ಮಡಿ ? ಹುಟ್ಟುತ ಸೂತಕ ಸಾಯುತ ಸೂತಕ ನಟ್ಟ ನಡುವೆ ಎಲ್ಲಿಂದ ಬಂತು ಈ ಮಡಿ"? ಎಂದು ತಿರುಮಂತ್ರ ಹಾಕಿದ್ದಾರೆ.

ಹಾಗೆಯೇ ಮಾತೃದೇವೋಭವ , ಪಿತೃದೇವೋಭವ, ಎಂದು ಬಾಯಲ್ಲಿ ಹೇಳಿ ತಂದೆ ತಾಯನ್ನು ನಿರ್ಲಕ್ಷಿಸಿ ಯಾತ್ರೆ ಹೋಗುವ ದ್ವಿಜರನ್ನು ಕುರಿತು 'ಮಾತಾ - ಪಿತರನು ಬಳಲಿಸಿದಾತನು ಯಾತ್ರೆಯ ಮಾಡಿದರೇನು ಫಲ ? ಸಟೆಯನ್ನಾಡರೂ ಮನುಜರು ಸತತ ಪಠಣೆಯ ಮಾಡಿದರೇನು ಫಲ ? ' ಚರ್ಮವ ತೊಳೆದರೆ ಕರ್ಮವೂ ಹೋಗುವುದೇ ? ಹೀಗೆ ಮುಕ್ತವಾಗಿ ವಿರೋಧಿಸಿ ನಿಜಭಕ್ತಿಯಿಂದ ಭಗವಂತನ ಸ್ಮರಿಸಲು ಪ್ರೇರೇಪಿಸುತ್ತಾರೆ.
ಸುಗ್ರಾಸ ಭೋಜನ ಮಾಡಿ, ಸುಖ ನಿದ್ದೆ ತೆಗೆದು ಭೋಜನ ಪ್ರಿಯರಾಗಿ ಬದುಕುವ ಜನರನ್ನು ಸರ್ವಜ್ಞನು ತನ್ನ ತ್ರಿಪದಿಯೊಂದರಲ್ಲಿ ಹೀಗೆ ಹೇಳಿದ್ದಾನೆ.

ಖಂಡಿಸದೆ ಕರಣವನು ದಂಡಿಸದೆ ದೇಹವನು
ಉಂಡುಂಡು ಸ್ವರ್ಗಕ್ಕೊಗಲು ಅದನೇನು
ರಂಡೆಯಾಳುವಳೇ ? ಸರ್ವಜ್ಞ.

ಅಧುನಿಕ ಕನ್ನಡ ಸಾಹಿತ್ಯಕ್ಕೆ ಭೀಮ ಬಲವನ್ನು ಒದಗಿಸಿಕೊಟ್ಟ ಕುವೆಂಪು ರವರಂತೂ ತಮ್ಮ ಸಾಹಿತ್ಯವನ್ನು 'ಸಾಮಾಜಿಕ ಪರಿವರ್ತನೆಯ ಅಸ್ತ್ರ' ವನ್ನಾಗಿ ಬಳಸಿದವರು. ಅವರ ಕತೆ , ಕಾದಂಬರಿ, ಮಹಾಕಾವ್ಯ, ನಾಟಕ, ಹೀಗೆ ಎಲ್ಲಾ ಬಗೆಯ ಪ್ರಕಾರದಲ್ಲೂ ಪುರೋಹಿತಶಾಹಿಯ ವಿರುದ್ಧ ಬಂಡೆದ್ದರು : ಓದುಗರು ಸಿಡಿದೇಳುವಂತೆ ಮಾಡಿದರು.

ಆಧುನಿಕ ಮಹಾಕಾವ್ಯವಾದ 'ಶ್ರೀ ರಾಮಾಯಣ ದರ್ಶನಂ' ಕೃತಿಯ ಆರಂಭದಲ್ಲಿಯೇ ಪಾಪಿಗುದ್ಧಾರಮಿಹುದೌ ಸೃಷ್ಟಿಯ ಮಹದ್‌ವ್ಯೂಹ ರಚನೆಯಲಿ ಎಂದು ಹೇಳಿ ಪರಂಪರಾನುಗತವಾಗಿ ನಡೆದು ಬಂದಿದ್ದ ದುಷ್ಟಪಾತ್ರಗಳನ್ನು ಉದಾತ್ತಗೊಳಿಸಿದ್ದಾರೆ. ಮೂಲ ರಾಮಾಯಣದ 'ಶಂಬೂಕವಧೆ' ಪ್ರಕರಣ ದಲ್ಲಿರುವ ಅಮಾಯಕ ಶೂದ್ರನ ತಲೆದಂಡವನ್ನು ಖಂಡಿಸಿ ವಿದ್ಯೆ, ಸಿದ್ಧಿ, ಯಾವೊಂದು ವರ್ಗದ ಸೊತ್ತಲ್ಲ ಎಂಬುದನ್ನು ಪ್ರತಿಪಾದಿಸಲು 'ಶೂದ್ರ ತಪಸ್ವಿ' ಯಂತಹ ನಾಟಕ ಬರೆದು ಪುರಾಣದ ವಸ್ತು, ಸಂವಿಧಾನ ಬದಲಾವಣೆ ಬಗ್ಗೆ ಬಂದ ಸಮಕಾಲೀನ ಸಾಹಿತಿಗಳ ವಿರೋಧಕ್ಕೆ ಸ್ಪಷ್ಟನೆ ನೀಡಿದರು.

'ಬೆರಳ್ಗೆ ಕೊರಳ್' ನಾಟಕದಲ್ಲಿ ಅಮಾಯಕ, ನಿಷ್ಪಾಪಿ ಹುಡುಗನ ಹೆಬ್ಬೆ ರಳು ತೆಗೆದುಕೊಂಡ ದ್ರೋಣರ ನೀತಿ ಖಂಡಿಸಿ, ನಿರಪರಾಧಿಗೆ ಶಿಕ್ಷೆ ವಿಧಿಸಿದರೆ ತಕ್ಕ ಫಲ ಅನುಭವಿಸ ಬೇಕಾಗುತ್ತದೆ ಎಂದು ತಿಳಿಸಲು ಏಕಲವ್ಯನ ತಾಯಿ ಶಾಪದ ಪರಿಣಾಮದಿಂದಲೇ ಆತನ ತಲೆ ಹೋಯ್ತು ಎಂಬ ಹೊಸ ವ್ಯಾಖ್ಯಾನ ನೀಡಿದರು. ತುಳಿತಕ್ಕೊಳಗಾದವರ ದನಿಯಾಗಿ 'ಜಲಗಾರ' ಎನ್ನುವ ನಾಟಕ ರಚಿಸಿದರು. ಮಲೆಗಳಲ್ಲಿ ಮದುಮಗಳು , ಕಾದಂಬರಿಯಲ್ಲೂ ಸಹ ಪುರೋಹಿತ ಶಾಹಿಯ ಕ್ರೌರ್ಯದ ದರ್ಶನ ವಿದೆ. ಇಷ್ಟೇ ಅಲ್ಲದೆ ಕಾಲಕ್ಕೆ ತಕ್ಕಂತೆ ಕುಣಿಯಬೇಕು,

ಬದಲಾವಣೆಯನ್ನು ಒಪ್ಪಬೇಕು, ಒಳ್ಳೆಯದು ಎಲ್ಲಿಂದ ಬಂದರೂ ಅದನ್ನು ಸ್ವೀಕರಿಸಬೇಕೆಂದು ಸಾರುವ ಕುವೆಂಪು ಮತ - ಮತೀಯ ಘರ್ಷಣೆಗೆ ಅಸಹ್ಯಪಟ್ಟು -

ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ
ಮತಿಯಿಂದ ದುಡಿಯಿರೈ ಲೋಕಹಿತಕೆ
ಆ ಮತದ ಈ ಮತದ ಹಳೆಮತದ ಸಹವಾಸ
ಸಾಕಿನ್ನು ಸೇರಿರೈ ಮನುಜ ಮತಕೆ
ಓ ಬನ್ನಿ ಸೋದರರೆ ವಿಶ್ವ ಪಥಕೆ.

ಎಂದು , ಮನುಜ ಮತ, ವಿಶ್ವಪಥಕ್ಕೆ ಕರೆ ನೀಡಿ ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಎಂದು ಘೋಷಿಸಿ ಆತ್ಮಶ್ರೀಯೆಡೆಗೆ ನಿರಂಕುಶಮತಿಗಳಾಗಿ ಎಂದು ಕರೆ ನೀಡಿದರು.

ಕೆ.ಎಸ್ ಭಗವಾನ್ ರವರ 'ಶಂಕರಾಚಾರ್ಯ ಮತ್ತು ಪ್ರತಿಗಾಮಿತನ ' - ಎಂಬ ಕೃತಿಯನ್ನು ಬರೆಯಲು, ಬೆಳೆಯಲು ಕುವೆಂಪು ನೀಡಿದ ಪ್ರೋತ್ಸಾಹ ಸ್ಮರಣಾರ್ಹ. 'ಶೂದ್ರರು ನಿತ್ಯನಾರಕಿಗಳು ' ಎಂದ ಮಧ್ವಾಚಾರ್ಯರನ್ನು ಕುವೆಂಪು ತಮ್ಮ ನಾಡಗೀತೆಯಲ್ಲಿ ಹೆಸರಿಸದೆ ಪ್ರತಿಭಟಿಸಿದ್ದಾರೆ.

ನಡೆದಾಡುವ ವಿಶ್ವಕೋಶ ಎಂದೇ ಖ್ಯಾತರಾಗಿದ್ದ ಕೆ.ಶಿವರಾಮಕಾರಂತರು ಚೋಮನದುಡಿಯಂತಹ ಕಾದಂಬರಿ ಬರೆದು ದಲಿತರ ಒಳತೋಟಿಗಳನ್ನು ದಾಖಲಿಸಿ ಅಂತರ್ಜಾತಿ ವಿವಾಹವಾಗಿ ಬೇರೆಯವರಿಗೆ ಮೇಲ್ಪಂಕ್ತಿಯಾದರು.

ಯು. ಆರ್ . ಅನಂತಮೂರ್ತಿಯವರು ಸಂಸ್ಕಾರ ದಂತಹ ಕಾದಂಬರಿ ಬರೆದು ಪುರೋಹಿತಶಾಹಿ ವ್ಯವಸ್ಥೆಯ ಬರ್ಬರತೆಯನ್ನು ಅನಾವರಣಗೊಳಿಸಿದರೆ, ಪೂರ್ಣಚಂದ್ರ ತೇಜಸ್ವಿಯವರು ಸಹ ತಂದೆಯವರ ಹಾದಿಯಲ್ಲೆ ನಡೆದರು. ಲಂಕೇಶ್ ರವರು ತಮ್ಮ ಬದುಕಿನುದ್ದಕ್ಕೂ ಪುರೋಹಿತ ಶಾಹಿ ವಿರುದ್ದ ತಮ್ಮ ಪತ್ರಿಕೆಯಲ್ಲಿ ಪ್ರತಿಪಾದಿಸುತ್ತಾ ಒಂದು ತಲೆಮಾರನ್ನು ಸಜ್ಜುಗೊಳಿಸಿದರು. ಅವರ ಮಕ್ಕಳು ಅದೇ ಹಾದಿಯಲ್ಲಿ ಸಾಗುತ್ತಿರುವುದು ಸುತ್ತ್ಯಾರ್ಹ. ಹೀಗೆ ನವ್ಯ . ದಲಿತ ಬಂಡಾಯ , ಪ್ರಗತಿ ಶೀಲ, ಮತ್ತು ಸ್ತ್ರೀ ಸಂವೇದನಾ ಸಾಹಿತಿಗಳಲ್ಲಿ ಬಹುಪಾಲು ಪುರೋಹಿತ ಶಾಹಿಯ ವಿರುದ್ದ ಸಾಹಿತ್ಯದಲ್ಲಿ ತೊಡಗಿರುವುದು ಶ್ಲಾಘನೀಯ.

ದೇವರು ಮತ್ತು ಧರ್ಮ ತೀರಾ ಖಾಸಗಿಯಾದದ್ದು. ಅದು ನಮ್ಮ ಆತ್ಮೋದ್ದಾರಕ್ಕೆ ಸಾಧನವಾಗಬೇಕೆ ಹೊರತು ಪಾಶವೀ ಕೃತ್ಯಕ್ಕೆ ಪ್ರೇರಣೆಯಾಗಬಾರದು. ಹಿಂದೂ ಧರ್ಮವನ್ನು ಗುತ್ತಿಗೆಗೆ ತೆಗೆದುಕೊಂಡಂತೆ ರಾಜಕೀಯ ಪಕ್ಷ ಮತ್ತು ಅದರ ಅಂಗಸಂಸ್ಥೆ ವರ್ತಿಸುತ್ತಿರುವಂತೆ ಕ್ರೈಸ್ತ ಮತ್ತು ಇಸ್ಲಾಂ ಸಹ ಮತೀಯ ಕಲಹ ಉಂಟುಮಾಡುತ್ತಿವೆ. ಒಂದು ಧರ್ಮದ ನ್ಯೂನ್ಯತೆಯನ್ನು, ಆ ಧರ್ಮದ ಜನರ ಬಡತನವನ್ನು ದುರುಪಯೋಗ ಪಡಿಸಿಕೊಂಡು ಮತಾಂತರ ದಂತಹ ಕೆಲಸ ಮಾಡುತ್ತಾ ಕಿಚ್ಚು ಹಚ್ಚುತ್ತಿವೆ. ಇಸ್ಲಾಂ ಧರ್ಮದಲ್ಲಂತೂ ಮೂಲಭೂತವಾದಿಗಳ ಉಪಟಳ ಹೇಳ ತೀರದು ಸಾರಾ ಅಬೂಬಕರ್, ಬಾನು ಮುಷ್ತಾಕ್ ಈ ಬಗ್ಗೆ ಬರೆದಿದ್ದಾರೆ. ಧರ್ಮ ಯುದ್ದದ

ಹೆಸರಿನಲ್ಲಿ ದೇಶದ ಮತ್ತು ಜನರ ಭದ್ರತೆಗೆ ಹಾನಿಯನ್ನುಂಟು ಮಾಡುವ ಭಯೋತ್ಪಾದನೆ ಖಂಡನಾರ್ಹ. ಎಲ್ಲಾ ಧರ್ಮಗಳ ಸಾರವೂ ಒಂದೆ. ದೇವನೊಬ್ಬ ನಾಮ ಹಲವು ಎನ್ನುವುದು ಇದೇ ಕಾರಣಕ್ಕೆ. ಎಲ್ಲಾ ಧರ್ಮಗಳು ಮಾನವರಿಂದಲೇ ರಚಿಸಲ್ಪಟ್ಟಿರುವುದರಿಂದ ಯಾವ ಧರ್ಮವೂ ಪರಿಪೂರ್ಣವಲ್ಲ. ಒಂದಲ್ಲ ಒಂದು ಲೋಪ ಎಲ್ಲ ಧರ್ಮದಲ್ಲೂ ಇದೆ. ತಸ್ಲೀಮಾನಸ್ರಿನ್, ಸಲ್ಮಾನ್ ರಶ್ದಿ ಮುಸ್ಲಿಂ ಮೂಲಭೂತವಾದಿಗಳ ಕೆಂಗಣ್ಣಿಗೆ ಗುರಿಯಾಗಿದ್ದಾರೆ.

ಆದರೂ ಇಂದಿಗೂ ಉಡುಪಿ, ಶೃಂಗೇರಿ, ಮಂತ್ರಾಲಯ ಮತ್ತಿತರ ಬ್ರಾಹ್ಮಣ ಮಠಗಳಲ್ಲಿರುವ ಪ್ರತ್ಯೇಕ ಭೋಜನ ವ್ಯವಸ್ಥೆ ತೊಲಗಿ ಸಹಪಂಕ್ತಿ, ಸಹಬಾಳ್ವೆ, ಸಾಮರಸ್ಯ ನಮ್ಮ ಬದುಕಿನ ಧ್ಯೇಯ ಮಂತ್ರವಾಗಬೇಕು. ಧರ್ಮ ವ್ಯಕ್ತಿಗತವಾದುದು : ನಿರಪೇಕ್ಷವಾದುದು, ಯಾರ ಮೇಲೂ ಬಲವಂತವಾಗಿ ಏರುವಂತದ್ದಲ್ಲ. ಇದನ್ನು ವಚನಕಾರರು, ಕೀರ್ತನಾಕಾರರು, ರಸ ಋಷಿಗಳು ಸಾಧಿಸಿ ತೋರಿಸಿದರು.

ಅಡಿ ಟಿಪ್ಪಣಿ :

1. ಡಾ II ಎಂ.ಎಸ್ . ಲೀಲಾ ಮೂರ್ತಿ , ದಾಸ ಸಾಹಿತ್ಯ ದರ್ಶನ , ಪುಟ - 8
2. ಎನ್. ಕೆ. ಕುಲಕರ್ಣಿ , ಪುರಂದರದಾಸರ ವರೆಗಿನ ಹರಿದಾಸ ಸಾಹಿತ್ಯ , ಪುಟ - 42

# ಅಧ್ಯಾಯ - 4

## ದಾಸಿಮಯ್ಯನ ವಚನಗಳ ಸಂಪಾದನೆಯಲ್ಲಿ ಅತ್ಯಾಧುನಿಕ ಪಠ್ಯ ನಿರ್ಮಾಣದ ಮೂಲಕ ಡಾ॥ಎಲ್. ಬಸವರಾಜುರವರು ಕನ್ನಡ ಸಂಸ್ಕೃತಿಗೆ ಕೊಟ್ಟಿರುವ ಕೊಡುಗೆಯ ವಸ್ತುನಿಷ್ಟ ಪರಿಶೀಲನೆ.

### ಲೇಖಕರ ಪರಿಚಯ :



ಡಾ॥ ಎಲ್. ಬಸವರಾಜು ಅವರು ರಾಜ್ಯದ ಗಡಿ ಪ್ರದೇಶವಾದ 'ಚಿನ್ನದಬೀಡು' ಎಂದು ಹೆಸರುವಾಸಿಯಾಗಿದ್ದರೂ ವಾಸ್ತವವಾಗಿ ಒಣ ಭೂಮಿಯಾಗಿರುವ ಕೃಷಿಯೇ ಪ್ರಧಾನ ಕಸುಬಾದ ಕೋಲಾರ ಜಿಲ್ಲೆಯ 'ಇಡಗೂರು' ಎಂಬ ಗ್ರಾಮದಲ್ಲಿ 1919 ರಲ್ಲಿ ಜನಿಸಿದರು. ತಮ್ಮ ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಾದ ಇಡಗೂರಿನಲ್ಲಿಯೂ, ಪ್ರೌಢಶಿಕ್ಷಣವನ್ನು ಶೈವ ಸಂಪ್ರದಾಯದ ಯಾತ್ರಾಸ್ಥಳವಾದ 'ಸಿದ್ಧಗಂಗೆ' ಯಲ್ಲಿ ಮುಗಿಸಿದರು. ನಂತರ ಕಾಲೇಜು ಶಿಕ್ಷಣವನ್ನು 'ಸಾಂಸ್ಕೃತಿಕ ನಗರ' ಎಂದೇ ಖ್ಯಾತಿ ಪಡೆದಿರುವ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ. ಎ. ಪದವಿ ಪಡೆದು ನಂತರ ಅದೇ ನಗರದ ಮಾನಸ ಗಂಗೋತ್ರಿಯಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಬಳಿಕ ಇದೇ ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸಕರಾಗಿ ತಮ್ಮ ವೃತ್ತಿ ಜೀವನ ಆರಂಭಿಸಿ ನಂತರ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ ಬಡ್ತಿ ಪಡೆದು ಮೂರು ದಶಕಗಳಿಗೂ ಹೆಚ್ಚು ಕಾಲ ಸೇವೆ ಸಲ್ಲಿಸಿ 1979 ರಲ್ಲಿ ನಿವೃತ್ತರಾದರು.

ಕನ್ನಡದ ಸೃಜನಶೀಲ ವಿದ್ವಾಂಸರಾದ ಡಾ॥ ಎಲ್. ಬಸವರಾಜು ರವರು "ಅಲ್ಲಮನ ವಚನ ಚಂದ್ರಿಕೆ ಮತ್ತು ಶಿವದಾಸ ಗೀತಾಂಜಲಿ" ಎಂಬ ವಿಷಯದ ಮೇಲೆ ಸಂಶೋಧನಾ ಗ್ರಂಥ ಬರೆದು ಮೈಸೂರು ವಿಶ್ವ ವಿದ್ಯಾನಿಲಯದಿಂದ 1968 ರಲ್ಲಿ ಡಿ. ಲಿಟ್ ಪದವಿ ಪಡೆದರು.

ಸಂಶೋಧನಾ ಕ್ಷೇತ್ರದಲ್ಲಿ ಮತ್ತು ಗ್ರಂಥ ಸಂಪಾದನೆಯಲ್ಲಿ ಮಹತ್ವದ ಸೇವೆ ಸಲ್ಲಿಸಿರುವ ಶ್ರೀಯುತರು 'ಬಸವಣ್ಣನ ವಚನಗಳು' , 'ಅಕ್ಕನ ವಚನಗಳು', 'ಸರ್ವಜ್ಞನ ವಚನಗಳು', 'ಅಲ್ಲಮನ ವಚನಗಳು', 'ದೇವರ ದಾಸಿಮಯ್ಯನ ವಚನಗಳು', ಇವು ಇವರು ಸಂಪಾದಿಸಿರುವ ಕೆಲವು ಕೃತಿಗಳು. 'ಅಲ್ಲಮನ ವಚನ ಚಂದ್ರಿಕೆ', 'ಶಿವದಾಸ ಗೀತಾಂಜಲಿ', 'ಶಿವಗಣ ಪ್ರಸಾದಿ ಮಹದೇವಯ್ಯನ ಶೂನ್ಯ ಸಂಪಾದನೆ' - ಈ ಸಂಪಾದನಾ ಕ್ಷೇತ್ರದ ತ್ರಿರತ್ನಗಳು ಎಂದು

ಕರೆಯಲಾಗಿದೆ.ಇವಿಷ್ಟು ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆ ಮತ್ತು ಸಂಪಾದನೆ ಯಾದರೆ, ಇವಲ್ಲದೆ ನಾಗವರ್ಮನ ಛಂದೋಂಬುಧಿಯೂ ಸೇರಿದಂತೆ ಕನ್ನಡ ಚಂದಸ್ಸಿನ ನಾಲ್ಕು ಪ್ರಮಾಣ, ಮಾದರಿ ಗ್ರಂಥಗಳನ್ನು ವಿವರವಾಗಿ ತಿದ್ದಿ, ತೀಡಿ, ಪರಿಷ್ಕರಿಸಿ ಸಿದ್ಧ ಪಡಿಸಿರುವುದಲ್ಲದೆ, ವೇಲಂಕರರ 'ಜಯದಾಮನ್' ಮಾದರಿಯಲ್ಲಿ ಇವರ 'ಕನ್ನಡ ಛಂದಸ್ಸಂಪುಟ' ರಚಿಸಲ್ಪಟ್ಟಿದೆ.

ಕನ್ನಡದ ಆದಿ ಕವಿ, ಮಹಾಕವಿಯಾದ ಪಂಪನು ಬರೆದ ಎರಡೂ ಕೃತಿಗಳು ಮಹಾಕಾವ್ಯಗಳು. ಮೂಲತಃ ಜೈನನಾದ ಆತನು ತನ್ನ ಕಾವ್ಯಕ್ಕೆ ಆಕರ ಗ್ರಂಥಗಳಾಗಿ ತೆಗೆದುಕೊಂಡಿದ್ದು ಜಿನಸೇನಾಚಾರ್ಯನ ಮಹಾ ಪುರಾಣವನ್ನು 'ಆದಿಪುರಾಣ'ವನ್ನಾಗಿಯೂ, "ವ್ಯಾಸಮುನೀಂದ್ರ ವಚನಾಮೃತ ವಾರ್ದಿಯನೀಸುವೆನ್ ಕವಿ ವ್ಯಾಸನನೆಂಬ ಗರ್ವಮೆನಗಿಲ್ಲ" - ಎಂದು ವಿನೀತವಾಗಿ ವ್ಯಾಸಭಾರತವನ್ನು 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪಭಾರತ' ವನ್ನು ಸಂಕ್ಷಿಪ್ತ ಗೊಳಿಸಿದುದನ್ನು ಹೊಸ ಮಾದರಿಯಲ್ಲಿ 'ಸರಳ ಪಂಪಭಾರತ' 'ಪಂಪನ ಸರಳ ಆದಿಪುರಾಣ' 'ಪಂಪನ ಆದಿಪುರಾಣ ಕಥಾಮೃತ' 'ಪಂಪನ ಸಮಸ್ತ ಭಾರತ ಕಥಾಮೃತ' - ಹೀಗೆ ವಸ್ತು, ಸಂವಿಧಾನ, ಭಾಷೆಗನುಗುಣವಾಗಿ ವೈವಿಧ್ಯಮಯ ಕೃತಿಗಳನ್ನು ರಚಿಸಿದ್ದಾರೆ.

ಭಾಷೆಯ ಬೆಳವಣಿಗೆ, ಉಚ್ಚಾರಣೆ, ಬಳಕೆ, ವೈವಿಧ್ಯತೆಗಳನ್ನು ಕುರಿತು ಸೂತ್ರಬದ್ಧವಾಗಿ ಬರೆದವನು ಭಾಷಾ ವಿದ್ವಾಂಸನಾದ ಕೇಶಿರಾಜ. ಹದಿಮೂರನೆ ಶತಮಾನದಲ್ಲಿದ್ದ ಈತನ 'ಶಬ್ದಮಣಿ ದರ್ಪಣ' ವು ಅನೇಕರಿಗೆ ಕಗ್ಗಂಟಾಗಿದ್ದ ಸಂಧರ್ಭದಲ್ಲಿ ಗ್ರಂಥದ ಮೂಲಪಾಠದೊಂದಿಗೆ ಅದಕ್ಕೆ ವ್ಯಾಖ್ಯಾನ ನೀಡಿ, ವಿವರ ಸಹಿತವಾಗಿ ಪ್ರಕಟಿಸಿ, ಅಧ್ಯಾಪಕರು, ವಿದ್ಯಾರ್ಥಿಗಳು ಮತ್ತು ಸಾಹಿತ್ಯಾಸಕ್ತರಿಗೆ ಮಾರ್ಗದರ್ಶನ ನೀಡಿದರೆಂಬುದಕ್ಕೆ ಬಸವರಾಜುರವರ ಹಳಗನ್ನಡ ವಿದ್ವತ್ ಪೂರ್ಣ ನಿದರ್ಶನಗಳಾಗಿವೆ.

ತನ್ನ ವಿಶಿಷ್ಟಲಯ ಮತ್ತು ಸರಳ ಭಾಷೆಯಿಂದ ಹೊಸ ಶಕೆಯನ್ನೆ ಹುಟ್ಟು ಹಾಕಿದುದು 'ವಚನ' ಸಾಹಿತ್ಯ. ಈ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಶ್ರೀಯುತರು ಮಾಡಿದ ಸಂಶೋಧನೆಗಳು 'ವಚನ'ವನ್ನು ಅರ್ಥೈಸಿಕೊಳ್ಳಲು ಮತ್ತು ವಿಮರ್ಶಿಸಲು ಹೊಸ ದಾರಿಯನ್ನೆ ತೆರೆದಿಟ್ಟವು. ಇವರ ಗದ್ಯಶೈಲಿ ವಿಶಿಷ್ಟವಾಗಿದ್ದು, ಮನಸ್ಸನ್ನು ಸೂರೆಗೊಳ್ಳುತ್ತದೆ.

ತಮ್ಮ ಬದುಕಿನುದ್ದಕ್ಕೂ ಗ್ರಂಥ ಸಂಪಾದನೆ ಮತ್ತು ಸಂಶೋಧನೆಯಲ್ಲಿಯೇ ತೊಡಗಿಸಿಕೊಂಡಿರುವ ಡಾ|| ಎಲ್. ಬಸವರಾಜು ಅವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ ಮತ್ತು ಗೌರವ ಪ್ರಶಸ್ತಿ, ಚಿದಾನಂದ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಪ್ರೊ|| ಭೂಸನೂರು ಮಠ ಪ್ರಶಸ್ತಿಗಳೂ ಸೇರಿದಂತೆ ಹೆಸರಾಂತ ಸಂಘ-ಸಂಸ್ಥೆಗಳ ಸನ್ಮಾನ-ಪುರಾಸ್ಕಾರಗಳು ಡಾ|| ಬಸವರಾಜುರವರಿಗೆ ಸಂದಿವೆ. ನೇರ ನಡೆ-ನುಡಿಯ, ಸರಳ ಸ್ವಭಾವದ, ಸ್ವತಃ ಶರಣ ತತ್ವದ ಪ್ರತಿಪಾದಕರಾಗಿರುವ ಇವರ ವಿದ್ವತ್, ಶ್ರಮ ಮತ್ತು ಸಾಧನೆಗಳಿಗಾಗಿ 'ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪುರಸ್ಕಾರ' ಕ್ರಿ.ಶ.2000 ದಲ್ಲಿ ಅರಸಿ ಬಂದಿದೆ. ನಾಡಿನ ಪ್ರತಿಷ್ಠಿತ ಪಂಪ ಪ್ರಶಸ್ತಿ (ಕ್ರಿ.ಶ.2000) ಕನ್ನಡ ಸಾಹಿತ್ಯ ಪರಿಷತ್ತಿನ ಚಾವುಂಡರಾಯ

ಪ್ರಶಸ್ತಿ (ಕ್ರಿ.ಶ.2002) ಮತ್ತು ಗಡಿ ಪ್ರದೇಶವಾದ ಕಾಸರಗೋಡು ಜಿಲ್ಲೆಯ ಮಂಜೇಶ್ವರದ ರಾಷ್ಟ್ರಕವಿ ಗೋವಿಂದಪೈ ಸ್ಮಾರಕ ಸಮಿತಿಯು ಪ್ರಪ್ರಥಮವಾಗಿ ರಾಷ್ಟ್ರಕವಿ ಗೋವಿಂದ ಪೈ ರಾಷ್ಟ್ರೀಯ ಪ್ರಶಸ್ತಿ ಡಾ॥ ಬಸವರಾಜುರವರಿಗೆ ಕ್ರಿ.ಶ 2008 ) ನೀಡಿ ಪ್ರಶಸ್ತಿಯ ತೂಕ ಹೆಚ್ಚಿಸಿದ್ದಾರೆ.

ಪ್ರಸ್ತುತ ದಾಸಿಮ್ಮಯ್ಯನ ವಚನಗಳ ಸಂಪಾದನೆಯಲ್ಲಿ ಹೇಗೆ ಓದುವ ಕೃತಿ, ಅತ್ಯಾಧುನಿಕ ಪಠ್ಯ ನಿರ್ಮಾಣ ಮಾಡಿದರೆಂಬುದು ಬಹುತೇಕರಿಗೆ ತಿಳಿದ ವಿಚಾರವೇ ಆಗಿದೆ.

"ಉತ್ಕೃಷ್ಟ ವಚನ ಸಾಹಿತ್ಯವನ್ನು ಬಸವಣ್ಣ, ಪ್ರಭು, ಅಕ್ಕ, ಚೌಡಯ್ಯ... ಮತ್ತಿತರರಿಗೂ ಮೊದಲು ವಿಪುಲ ಸಾಹಿತ್ಯ ರಚನೆಯಾಗಿದೆ ಎಂಬುದೀಗ ನಿರ್ವಿವಾದ. ಆದರೆ ಆ ಅಖಂಡ ಸಾಹಿತ್ಯವನ್ನು ಸುರಕ್ಷಿತವಾಗಿ ರಕ್ಷಿಸುವುದು ಮುಖ್ಯ. ಈ ವಚನ ಭಂಡಾರವನ್ನು ಮುಂದಿನ ತಲೆಮಾರಿನವರಿಗೂ ಯಥಾಶಕ್ತಿ ಸಂರಕ್ಷಿಸಿಕೊಂಡು ಹೋಗುವುದು ಎಲ್ಲರ ಜವಾಬ್ದಾರಿಯಾಗಿತ್ತು. ಆದರೆ ಮತೀಯವಾದ ಅಂದಿನ ಅಹಿತಸ್ಪರ್ಧೆ, ತಾಡಪತ್ರ ಶತ್ರುಗಳಾದ ಕೀಟಗಳ ಉಪಟಳ, ವಿದೇಶಿಯರ ದಂಡುದಾಳಿ, ಪರಮತ ಖಂಡನೆಗಾಗಿ, ಸ್ವಮತ ಮಂಡನೆಗಾಗಿ ಹಿಂದಿನ ಕಾಲದಲ್ಲಿ ನಡೆಯುತ್ತಿದ್ದ ಜಿದ್ದಾ ಜಿದ್ದಿ ವಾದಿಗಳಿಂದಾಗಿ ಸೋತವನು ಎತ್ತುಗಳ ಮೇಲೆ ಹೇರಿಕೊಂಡು ಬಂದಿದ್ದ ಓಲೆಯ ಗ್ರಂಥಗಳನ್ನು ಸುಡುವುದು ಒಮ್ಮೊಮ್ಮೆ ಒಂದು ಷರತ್ತಾಗಿರುತ್ತಿತ್ತು! ಇದು ಆಗಿನ ಕಂಟಕವಾದರೆ ಇಂದು, ಸುವ್ಯವಸ್ಥಿತ ಸರಸ್ವತಿ ಭಂಡಾರ ಗಳಲ್ಲೇ ಕಾಲದಿಂದ ಕಾಲಕ್ಕೆ ಓಲೆಯ ಗ್ರಂಥಗಳು ಕೀಟಗಳಿಗೆ ಊಟವಾಗಿ ಲೂಟಿಯಾಗುತ್ತಿವೆ ಎಂದರೆ - ಅಂದು ಸಹ ಕೀಟಗಳ ಹಾವಳಿ ಇತ್ತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಜೊತೆಗೆ ಹಂತಕರ ದಾಳಿಗೆ ಸಿಕ್ಕ ಜನ ಎಷ್ಟೋ ಸಲ ತಮ್ಮ ಪ್ರಾಣಗಳನ್ನು ಉಳಿಸಿಕೊಳ್ಳುವ ಆತುರದಲ್ಲಿ ಧರ್ಮದ ಆಧಾರ ಸ್ತಂಭಗಳಂತಿದ್ದ ಈ ಓಲೆಯ ಗರಿಗಳನ್ನು, ಗ್ರಂಥಗಳನ್ನು ಬಿಟ್ಟು ಓಡಿ ಹೋದಾಗ ಅವು ಶತ್ರುಗಳು ಊರಿಗಿಟ್ಟ ಬೆಂಕಿಯಲ್ಲಿ ಬೆಂದು ಬೂದಿಯಾದವು. - ಇಂತಹ ಹಲವಾರು ಉಪದ್ರವಗಳಿಂದ ವಚನ ಸಾಹಿತ್ಯವೇ ಏಕೆ - ನಮ್ಮ ಸಾಹಿತ್ಯದ ಇತರ ಪ್ರಕಾರಗಳು ಮತ್ತು ಶಾಸ್ತ್ರ ಕೃತಿಗಳ ಬಹುಅಂಶ ನಾಮಾವಶೇಷವೋ ಇಲ್ಲ ನಿಶ್ಶೇಷವೋ ಆಗಿ ಹೋದವು". ಎಂದು ಅಕ್ಕನ ವಚನಗಳು ಕೃತಿಯ ಪೀಠಿಕಾ ಭಾಗದಲ್ಲಿ ಡಾ॥ ಎಲ್. ಬಸವರಾಜುರವರೆ ಸ್ವತ: ತಮ್ಮ ಸಂಕಟ ತೋಡಿಕೊಂಡಿದ್ದಾರೆ.

ಹದಿನೈದನೆ ಶತಮಾನದ ನಂತರ ಬಂದ ವಚನಕಾರರು, ಎಷ್ಟೇ ವಚನಗಳನ್ನು ನಮಗೆ ದೊರಕಿಸಿಕೊಟ್ಟಿದ್ದರೂ , ಆಗಿನವರಿಗೆ ಮುಂದಾಲೋಚನೆಯ ಕೊರತೆಯಿಂದ ಲಭ್ಯವಿದ್ದುದನ್ನು ಸಂಗ್ರಹಿಸುವ ಕಾರ್ಯ ಮಾಡಲಿಲ್ಲವೆ ? ಎಂಬ ಸಂದೇಹ ಉಂಟಾಗುತ್ತದೆ.

ಹೀಗಾಗಿ ಶರಣರು ನಿರ್ಮಾಣ ಮಾಡಿದ ಸಮಗ್ರ ವಚನ ನಮಗೆ ಸಿಕ್ಕಿಲ್ಲ. ಸಿಕ್ಕಿರುವುದೆಲ್ಲ - ಸಂಗ್ರಾಹಕರ ಅಭಿರುಚಿಗೆ, ವಾದಕ್ಕೆ ಅಳವಡುವಷ್ಟು ಮಾತ್ರ. ಇದಷ್ಟೆ ಅಲ್ಲದೆ ಸಿಕ್ಕಿದ ವಚನ ಸಾಹಿತ್ಯವು ನಿರಂತರವಾಗಿ ಹರಿಯದೆ ಎರಡು ಘಟ್ಟಗಳಲ್ಲಿ ಸ್ಥಗಿತ ಕೊಂಡಿತು. ಮೊದಲನೆಯದಾಗಿ 13- 14 ನೇ ಶತಮಾನಗಳಲ್ಲಿ ಕನ್ನಡ ನಾಡಿನ ಮೇಲೆ ನಡೆದ ತುರ್ಕರ ಧಾಳಿ.

ಎರಡನೆಯದಾಗಿ 17 - 19 ನೇ ಶತಮಾನಗಳಲ್ಲಿ ಇಂಗ್ಲೀಷರ ಆಕ್ರಮಣವಾದಾಗ ಮೊದಲನೆ ಆಕ್ರಮಣದಲ್ಲಿ ಆದ ಹಿನ್ನೆಡೆ ತಾತ್ಕಲಿಕ ವಾಗಿದ್ದು ವಚನ ಪುನ: ಪುಷ್ಟಿಗೊಂಡರೆ , ಎರಡನೆ ಹಂತದ ಇಂಗ್ಲೀಷರ ಆಡಳಿತ ಸೂತ್ರ. ಪಾಶ್ಚತ್ಯರ ವಿಭಿನ್ನ ಸಂಪ್ರದಾಯ, ನಮ್ಮ ಜೀವನಮೌಲ್ಯ ಮತ್ತು ಶೀಲ ಸ್ವಭಾವಗಳನ್ನು ಕೆಣಕಿ ಪಲ್ಲಟಗೊಳಿಸಲಾರಂಭಿಸಿದವು. ಬ್ರಿಟಿಷರು ತುರ್ಕರಂತೆ ಧರ್ಮ ಪ್ರಸಾರಕ್ಕೆ ಖಡ್ಗ ಝಳಪಿಸದೆ ..... ಜನರನ್ನು ಸಾಕ್ಷರ ಅನುಕೂಲ - ಆರೋಗ್ಯ ನೀಡಿ -ಅದರಿಂದ ಜನರಲ್ಲಿ ಕೃತಜ್ಞತೆ ಮೂಡಿಸಿ ತಮ್ಮ ಕ್ರೈಸ್ತ ಧರ್ಮದತ್ತ ಸೆಳೆಯ ತೊಡಗಿದರು. ಅವರು ತಂದ ಮುದ್ರಣ ಯಂತ್ರದಿಂದಾಗಿ ವಚನ ಸಾಹಿತ್ಯವು ಹಿಂದಿನಂತೆ ಪ್ರಗತಿಯಾಗದೆ, ಅಚ್ಚೂ ಆಗದೆ ನಿಂತು ಹೋಗಿ ಮತ್ತಷ್ಟು ಕಣ್ಮರೆಯಾಯಿತು. ಅಚ್ಚು ಹಾಕುವ ಯಂತ್ರಗಳ ಚಲನೆಯ ವೇಗ ವರ್ಧಿಸಿ ದಂತೆಲ್ಲಾ ಓಲೆಯ ಕಂಠದ ಓಟ ಕುಂಠಿತವಾಯಿತು. ಕೊನೆಗೆ ಕಂಠಪತ್ರದ ಲೇಖನ ಕಲೆಯನ್ನೇ ಜನ ಮರೆತು ಬಿಟ್ಟರು.

ಪ್ರೊ॥ ಡಿ.ಎಲ್. ನರಸಿಂಹಾಚಾರ್ಯರು ತಮ್ಮ ಕನ್ನಡ ಗ್ರಂಥ ಸಂಪಾದನೆಯಲ್ಲಿ ಮುದ್ರಿತವಾದ 'ಜೈಮಿನಿಭಾರತ' ದ ವೃತ್ತಾಂತ ಪ್ರಸ್ತಾಪಿಸುತ್ತಾ "ಅಚ್ಚು ಮಾಡುವುದಕ್ಕಿಂತ ಬರೆದು ಕೊಳ್ಳುವುದೇ ಸುಮಾರು 1875 ರವರೆಗೆ ಅನುಕೂಲ ಎನಿಸಿತ್ತು" ಎಂದಿದ್ದಾರೆ. ಆಂಗ್ಲರ ಆಸಕ್ತಿಯಿಂದ 19ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಅನೇಕ ವೀರಶೈವ ಗ್ರಂಥಗಳು ಪ್ರಕಟವಾದರೂ ವಚನ ಸಾಹಿತ್ಯವೇಕೆ, ಆ ಶತಮಾನದ ಕೊನೆಯಲ್ಲಾದರೂ ಮುದ್ರಣವಾಗಲಿಲ್ಲ? ಎಂಬುದೆ ಕುತೂಹಲಕಾರಿ ಪ್ರಶ್ನೆ!

ವಚನ ಗುಮ್ಮಟ ಎಂದೇ ಖ್ಯಾತರಾದ ಫ.ಗು. ಹಳಕಟ್ಟಿಯವರು ತಮ್ಮ ವಚನ ಶಾಸ್ತ್ರ ಸಾರ ದ ಮುನ್ನುಡಿಯಲ್ಲಿ ಹೇಳಿರುವಂತೆ ಮೊದಲ ಬಾರಿಗೆ ಶರಣ ಸಾಹಿತ್ಯ ಸಂಶೋಧನೆಗಾಗಿ, ಪ್ರವಾಸಮಾಡಿದಾಗ ಸಿಕ್ಕ ಸಿಕ್ಕ ಎಲ್ಲ ವಚನಗಳನ್ನು ಸಂಗ್ರಹಿಸದೆ, ತಮಗೆ ಮಹತ್ವ ವೆಂದು ಕಂಡು ಬಂದ ವಚನಗಳನ್ನಷ್ಟೇ ಬರೆದುಕೊಂಡರು. ಆಗ ಅವರು ಬಿಟ್ಟ ಬಹುಭಾಗ ಅಂದಿಗೇ ಅಲ್ಲ ಇಂದಿಗೂ ಎಂದೆಂದಿಗೂ ಕಣ್ಮರೆಯಾದ ಸಂಭವವುಂಟು!

ಆರ್. ನರಸಿಂಹಾಚಾರ್ ರವರು 1907 ರಲ್ಲಿ ಕವಿಚರಿತೆಯ ಪ್ರಥಮ ಸಂಪುಟ ರೂಪಿಸಲು ಹಲವಾರು ಲೈಬ್ರರಿಗಳಲ್ಲಿ ತಾವು ನೋಡಿದ್ದ ಅನೇಕ ಓಲೆ ಪ್ರತಿಗಳನ್ನು ಎರಡನೆ ಸಂಪುಟ ಬರೆಯಲು ಮತ್ತೆ ಪರಿಶೀಲಿಸಲು ಹೋದಾಗ ಹಲವು ಹುಳು ತಿಂದು ಹೋಗಿದ್ದವು! ವ್ಯವಸ್ಥಿತ ಭಂಡಾರಗಳಲ್ಲಿದ್ದ ಓಲೆಗಳ ಪಾಡೇ ಹೀಗಾದರೆ, ಮನೆ! ಮಠ - ಗುಡಿ ಗುಂಡಾರಗಳಲ್ಲಿ ಇದ್ದ ವಚನ ಸಾಹಿತ್ಯದ ಓಲೆ ಕಟ್ಟುಗಳು ಹೇಗೆ ಮಣ್ಣಾಗಿರಬಹುದು ? ಊಹಿಸಿ! ಮೊಗ್ಲಿಂಗ್, ಕಿಟ್ಟೆಲ್, ಬಿ.ಎಲ್. ರೈಸ್ ರವರು ಹಲವಾರು ಕೃತಿ ಪ್ರಕಟಿಸಿದರೂ ರೈಸರು ಕೊಟ್ಟಿರುವ ಕವಿಗಳ ಪಟ್ಟಿಯಲ್ಲಿ ಬಸವ, ಅಕ್ಕನ ಹೆಸರೇ ಇಲ್ಲ!

ಆರ್. ನರಸಿಂಹಚಾರ್ ರವರು ಕವಿತೆಯ ಮೂರನೆ ಸಂಪುಟದಲ್ಲಿ ಹೇಳಿದ ಮಾತು ಇಲ್ಲಿ ಸ್ಮರಣಾರ್ಹ. "ವಚನಗಳು ಗೂಢವಾದ ವೇದಾಂತ ವಿಷಯಗಳನ್ನು ಸುಲಭವಾದ ಮಾತುಗಳಿಂದ

ಬಿಗಿಯಾದ ಶೈಲಿಯಲ್ಲಿ ಮನ ಮುಟ್ಟುವಂತೆ ಬೋಧಿಸುತ್ತವೆ. ಇವನ್ನು ಕನ್ನಡ ಉಪನಿಷತ್ತುಗಳು ಎಂದು ಕರೆಯಬಹುದು" ಎಂದಿದ್ದಾರೆ. ಇಂತಹ ಕನ್ನಡ ಉಪನಿಷತ್ತುಗಳನ್ನು ವಚನ ಸಂಪಾದನೆಯಲ್ಲಿ ನೂತನ ಪಥ್ಯ ನಿರ್ಮಾಣದ ಮೂಲಕ ಕನ್ನಡ ಸಂಸ್ಕೃತಿಗೆ ಡಾ॥ ಬಸವರಾಜುರವರು ನೀಡಿರುವ ಕೊಡುಗೆಯನ್ನು ವಸ್ತು ನಿಷ್ಠವಾಗಿ ಪರಿಶೀಲಿಸೋಣ.

ಡಾ॥ ಬಸವರಾಜುರವರ ದೇವರ ದಾಸಿಮಯ್ಯನ ವಚನಗಳನ್ನು ಸಂಗ್ರಹಿಸಿ, ಸಂಪಾದಿಸುವ ಹೊಣೆ ಹೊತ್ತು, ಗ್ರಂಥ ರಚನೆಗಾಗಿ ಕೆಲವು ಕೃತಿಗಳನ್ನು ಅಭ್ಯಾಸ ಮಾಡಲು ಆಗಿನ ಮೈಸೂರು ವಿ.ವಿ.ಯ ಉಪಕುಲಪತಿಗಳಾಗಿದ್ದ ಶ್ರೀ. ದೇ. ಜವರೇಗೌಡ ರವರು ಮತ್ತು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಇಲ್ಲಿದ್ದ ಆಗಿನ ನಿರ್ದೇಶಕರಾದ ಡಾ॥ ಹಾ. ಮಾ.ನಾಯಕರ ನೆರವಿನಿಂದ ಅಗತ್ಯವಿದ್ದ ಗ್ರಂಥಗಳನ್ನು ಪಡೆದು ದಾಸಿಮಯ್ಯ ಮತ್ತು ವಚನ ಸಾಹಿತ್ಯ ಕುರಿತು ಈವರೆಗೆ ಬಂದಿರುವ ಗ್ರಂಥಗಳನ್ನು ಅಭ್ಯಾಸ ಮಾಡಿದರು.

ಈ ಬಗ್ಗೆ ಅಭ್ಯಸಿಸುತ್ತಿದ್ದಾಗ 1953 ರಲ್ಲಿ ಪ್ರಕಟವಾಗಿದ್ದ ದೇವರ ದಾಸಿಮಯ್ಯ ಪ್ರಶಸ್ತಿ ಗ್ರಂಥದಲ್ಲಿ ದೇವಾಂಗ ದಾಸಿಮಯ್ಯ ಪುರಾಣ ಎಂಬ ವಿಷಯವನ್ನೆತ್ತಿಕೊಂಡು ಅದನ್ನು ಕೂಲಂಕಷವಾಗಿ ಮಂಡಿಸಿ ವಿಮರ್ಶಿಸಿದ ಡಾ॥ ಡಿ.ಎಲ್. ನರಸಿಂಹಾಚಾರ್ಯರು ಅದರ ಕೊನೆಯಲ್ಲಿ ನೀಡಿದ ಸಲಹೆ ಬಸವರಾಜು ರವರ ಗಮನ ಸೆಳೆಯಿತು. ಅದು "ದೇವರ ದಾಸಿಮಯ್ಯನ ಕಥೆಗಳನ್ನು ತಿಳಿಸುವ ಎಲ್ಲ ಪುರಾಣಗಳನ್ನು ಹೋಲಿಸಿ ನೋಡಿ ಯಾವ ಯಾವುದು ಹೇಗೆ ಹೇಗೆ ಪ್ರವೃದ್ಧವಾಗಿ ಹಬ್ಬಿದೆ ಎಂಬುದನ್ನು ಕಂಡು ಹಿಡಿಯುವ ಕೆಲಸ ಮುಂದಕ್ಕೆ ನಡೆಯಬೇಕಾದ್ದು ಅವಶ್ಯಕ."

ಈ ಅವಶ್ಯಕತೆಯನ್ನು ವಿಶಿಷ್ಟವಾಗಿ ಆದರೂ ಒಂದು ಚೌಕಟ್ಟಿನಲ್ಲಿ ಪೂರೈಸಲು ಪ್ರಯತ್ನಿಸಿರುವುದಾಗಿ ಲೇಖಕರು ಪುಸ್ತಕದ ಆರಂಭವಾದ ಪೀಠಿಕಾ ಭಾಗದಲ್ಲಿಯೇ ತಿಳಿಸಿದ್ದಾರೆ. ಇದೀಗ ದೇವರ ದಾಸಿಮಯ್ಯನ ವಚನಗಳು ಆರು ಮುದ್ರಣ ಕಂಡಿದ್ದು, ಬಸವಣ್ಣನವರ ವಚನಗಳು ಒಂಭತ್ತು ಮುದ್ರಣವನ್ನು, 'ಅಕ್ಕನ ವಚನಗಳು' ಎಂಟು ಮುದ್ರಣವನ್ನು, 'ಅಲ್ಲಮನ ವಚನಗಳು' ಆರು ಮುದ್ರಣವನ್ನು ಮತ್ತು ಸರ್ವಜ್ಞನ ವಚನಗಳು ಎಂಟು ಬಾರಿ ಮರು ಮುದ್ರಣಗೊಂಡು ಓದುಗರ ಆಸಕ್ತಿಯನ್ನು ತಣಿಸಿವೆ.

ಜೇಡರ ದಾಸಿಮಯ್ಯನು ದೇವರ ದಾಸಿಮಯ್ಯನು ಒಬ್ಬನೇ ಎಂಬುದನ್ನು, ಬಸವಾದಿ ಶರಣರಿಗಿಂತ ಈತನು ಹಿರಿಯನು, ಮಾರ್ಗದರ್ಶಿಯು ಎಂಬುದನ್ನು ಅನೇಕ ವಚನಗಳು ಮತ್ತು ಉದಾಹರಣೆ ಸಹಿತ ಸಂಶೋಧಿಸಿ, ವಿವರಿಸಿರುವ ದಾಸಿಮಯ್ಯನನ್ನು 'ಜಾನಪದ ಜಗದ್ಗುರು' ಎಂದು ಕರೆದಿದ್ದಾರೆ.

ಹಾಗೆಯೇ ದಾಸಿಮಯ್ಯನ ಜೀವನ ವೃತ್ತಾಂತ, ಖಾಸಗಿ ಜೀವನ, ಪ್ರಭಾವ, ಶಿವನಿಷ್ಠೆ, ಭಕ್ತಿ, ಸಾಧನೆ, ಓರಗೆಯ ವಚನಕಾರರ ಪ್ರಸ್ತಾಪ, ಪರಮತದವರ ಉಪಟಳ, ದಾಸಿಮಯ್ಯ ಕವಿಗಳು , ಶರಣರು ನೀಡಿರುವ ವಿವರವನ್ನು ಸವಿಸ್ತಾರವಾಗಿ ಸುಮಾರು ನಲವತ್ತು ಪುಟಗಳಲ್ಲಿ ವಿವರಿಸಿ, ನಂತರ ಕಾಲಕಾಲಕ್ಕೆ ಬಂದ ಪರಿಷ್ಕರಗಳನ್ನು, ಹೊಸ ಹೊಸ ಸಂಗತಿಗಳನ್ನು ಅಡಿಟಿಪ್ಪಣೆ ಮೂಲಕ ಚರ್ಚಿಸಿದ್ದಾರೆ.

ಈ ಹಿಂದೆ ಗ್ರಂಥ ಸಂಪಾದನೆಯ ಸಮಸ್ಯೆ. ಅವುಗಳ ಜೋಡಣೆ, ಪರಿಷ್ಕರಣೆ, ತಿದ್ದುಪಡಿ, ಮೂಲ ಆಶಯ ಕೆಡದಂತೆ ವ್ಯಾಖ್ಯಾನ ಮಾಡುವುದು, ವ್ಯಾಖ್ಯಾನ ಕುರಿತು ವಿವಿಧ ವಿದ್ವಾಂಸರು ಮತ್ತು ಲೇಖಕರ ಖಂಡನೆ - ಮಂಡನೆ. ನಂತರ ಅಂತಹ ಅಭಿಪ್ರಾಯವನ್ನು ಟೀಕಿಸುವ , ತನ್ನ ಮತವನ್ನು ಸ್ಪಷ್ಟ ಪಡಿಸುವ ವಿಚಾರ, ವಿವರಣೆ , ಉದಾಹರಣೆ - ಇತ್ಯಾದಿಗಳನ್ನು ನೀಡಿ ಸರ್ವಾನುಮತ, ಬೆಂಬಲ ಸಿಗುವಂತೆ, ವಿದ್ವತ್ವಲಯ ಅಂಗೀಕರಿಸುವಂತೆ ವಿಚಾರ ಮಂಡನೆ ಮಾಡಬೇಕಾಗುತ್ತದೆ.

ನಂತರ ಶಿವಶರಣರು ಇಂದಿನ ವಿದ್ಯಾವಂತರಂತೆ ತಮ್ಮ ಕೀರ್ತಿ , ಹೆಸರಿಗಾಗಿ ಪರಿತಪಿಸುವುದನ್ನು , ತಮ್ಮ ಹೆಸರಿನೊಂದಿಗೆ ತಾವು ಪಡೆದಿರುವ ಪದವಿ, ಪ್ರಮಾಣ ಪತ್ರಗಳನ್ನು , ಮುದ್ರಿಸಿಕೊಳ್ಳುವಂತೆ ವಚನಕಾರರಲ್ಲಿ ಅಂತಹ ಕೀರ್ತಿಯ ಹಂಬಲವಿದ್ದಂತೆ ಕಂಡು ಬರುವುದಿಲ್ಲ. ಅವರೆಲ್ಲರೂ ತಮ್ಮ ವಚನ ವನ್ನು ಆಡುಮಾತಿನ ಮೂಲಕ, ಕಂಠಸ್ಥ ಸಂಪ್ರದಾಯದಲ್ಲಿ ಹರಿದು ಬಿಟ್ಟಿದ್ದರು. ಅಪರೂಪಕ್ಕೆ ಅದನ್ನ ಬರೆದವರೋ ? ಸಂಗ್ರಹಿಸಿದವರ ಮುಂದಾಲೋಚನೆಯಿಂದಾಗಿ ನಮಗೆ ತಾಳೆಗರಿ, ಓಲೆಗರಿ, ಶಾಸನ - ಮತ್ತಿತ್ತರ ಮುದ್ರಣದಲ್ಲಿ ಸಿಕ್ಕಿವೆ.

ಬಹುತೇಕ ಶರಣರು ತಮ್ಮ ಅಭಿವ್ಯಕ್ತಿಯನ್ನು ಇಷ್ಟದೈವದ ಹೆಸರಿನಲ್ಲಿ ವ್ಯಕ್ತಪಡಿಸಿರುವುದನ್ನು ಕಾಣುತ್ತೇವೆ. ಕೆಲವು ವಚನಗಳಲ್ಲಿ ಅದೂ ಇಲ್ಲ. ಮತ್ತೆ ಹಲವು ಆಧಾರಗಳೆಂದು ಕೈಗೆತ್ತಿಕೊಂಡರೆ ಪ್ರಕ್ಷಿಪ್ತ ಅಥವಾ ಅನಾಮಧೇಯ ವ್ಯಕ್ತಿಯು ಪ್ರಭಾವಿತನಾಗಿ ಜನಪ್ರಿಯ ವ್ಯಕ್ತಿಗಳ ಶೈಲಿಯಲ್ಲಿ, ಇಷ್ಟ ದೈವದ ಹೆಸರಿನಲ್ಲಿ ಸೇರಿಸಿ ಬಿಟ್ಟಿರುವುದನ್ನು ಹುಡುಕಿ ತೆಗೆಯುವುದು ಸಂಶೋಧಕನಿಗೆ ಒಂದು ದೊಡ್ಡ ಸವಾಲೇ ಸರಿ.

ಇಂತಹ ಅದೆಷ್ಟೋ ವಚನಗಳನ್ನು ಸಂಗ್ರಹಿಸಿ, ಅದರ ವಸ್ತು, ವಿನ್ಯಾಸ, ಸಂವಿಧಾನಕ್ಕನುಗುಣವಾಗಿ ವಿಂಗಡಿಸಿ ವೈಯಕ್ತಿಕ ವಿವರಗಳಿಲ್ಲದ ವಚನಗಳನ್ನು ಅವುಗಳ ಇಷ್ಟದೈವದ ಹೆಸರಿನ ಮೇಲೆ ಅದರ ಕರ್ತೃವನ್ನು ಬೆಳಕಿಗೆ ತರಬೇಕಾಗುತ್ತದೆ. ಯಾವುದಾದರೊಂದು ಮತಕ್ಕೋ, ವ್ಯಕ್ತಿಗೋ , ನಿಷ್ಠನಾಗಿ, ಪೂರ್ವಾನುಗ್ರಹ ಪೀಡಿತ ಭಾವನೆಯೊಂದಿಗೆ ಸಂಶೋಧನೆ ಕೈಗೊಂಡರೆ ಅಂತಹ ಸಂಶೋಧಕನು ಅಜ್ಞಾತ ಕವಿಗೂ, ಸಾಹಿತ್ಯ ವಲಯಕ್ಕೂ; ಆ ಸಂಸ್ಕೃತಿಗೂ ಮತ್ತು ಆ ಮೂಲಕ ಓದುಗರಿಗೂ ದಿಕ್ಕು ತಪ್ಪಿಸಿದ ತಪ್ಪಿತಸ್ಥನಾಗುತ್ತಾನೆ.

ಇಂತಹ ಕೀಳು ಬುದ್ಧಿಯಿಂದ, ನೀಚತನ ದಿಂದ ಸಂಶೋಧಕ ಮುಕ್ತನಾಗ ಬೇಕಾಗುತ್ತದೆ. ಪ್ರಸ್ತುತ ನಮಗೆ ಡಾ|| ಎಲ್. ಬಸವರಾಜುರವರು 150 . ಅಚ್ಚುಕಟ್ಟಾಗಿ ಕ್ರಮವಾಗಿ ಜೋಡಿಸಿರುವ ಸಂಶೋಧಕರು ತಿದ್ದುಪಡಿಬರಬೇಕಾದ ಜಾಗದಲ್ಲಿ ಆಯಾ ಪದಪುಂಜದ ಎದುರು ಸಂಖ್ಯಾ ಸೂಚಕಗಳನ್ನು ಕೊಟ್ಟು ಅದೇ ಪುಟದ ಕೆಳಗೆ ಗೆರೆ ಎಳೆದು ಅಡಿ ಟಿಪ್ಪಣಿ ನೀಡಿದ್ದಾರೆ.

ಕ್ರಮಸಂಖ್ಯೆ ‘ 1 ’ ರ ವಚನದಲ್ಲಿ ಮೂಲದಲ್ಲಿ: ಅಂಕಿತನಾಮವಿಲ್ಲದ್ದನ್ನು ಗುರುತಿಸಿ ನೀಡಿದ್ದಾರೆ. ಕ್ರ. ಸ. 2 ರ ವಚನದಲ್ಲಿ ಕಡೆಗೀಲಿಲ್ಲದ ಬಂಡಿ ಹೊಡಗೆಡೆವುದು ಮಾಬುದೆ ಎಂಬ ಸಾಲನ್ನು ಹೊಡೆಗಡೆ ಮಾಣ್ಬುದೆ ಎಂದು ತಿದ್ದಿ, ಇಡಿದರ್ಪ ಯೇರಿದ್ದ ಒಡಲೆಂಬ ಭಂಡಿಗೆ ಎಂಬ ಸಾಲನ್ನು

ಕಡುದರ್ಪವೇರಿದ ಒಡಲೆಂಬ ಬಂಡಿಗೆ ಎಂದು ಮಾರ್ಪಾಡು ಮಾಡಿ ಭಂಡಿಯ ಮಹಾಪ್ರಾಣ ಕೈಬಿಟ್ಟಿದ್ದಾರೆ.

3 ನೇ ಪದ್ಯದಲ್ಲಿರುವ ಮಣಿ ಗರಿ ಎಂಬ ಪದದ ಜಾಗದಲ್ಲಿ ಗಣ ಎಂದು ಸೇರಿಸಿ, ಹಾಗೆಯೇ 'ಮಣಿವುತಿಪ್ಪೆನಯ್ಯ' ಎಂಬ ಜಾಗದಲ್ಲಿ ಮಣಿವುತಿದ್ದೆನಯ್ಯ ಪದವಿಟ್ಟಿದ್ದಾರೆ.

4 ರ ವಚನದಲ್ಲಿ 'ಧರೆಯ' ಎಂದಿದ್ದ 'ಬಿರುದಾವಳಿ ಸ್ತೋತ್ರದ ವಚನ'ದ ಮೂಲ ಪದದ ಬದಲಾಗಿ 'ತಿರಿಯ' ಎಂದು ಏಕಿಟ್ಟರೋ ತಿಳಿಯದು!

5 ರ ವಚನದಲ್ಲಿ ಹೊತ್ತಿಹರೆಂದು ಅಹರ್ನಿಶ; 'ಹೊತ್ತಿದ್ದಹರೆಂದು ಅನಿಶಾ' ಎಂಬುದನ್ನು ಸ್ವಲ್ಪ ಬದಲಿಸಿ ಹೊತ್ತಿಹರೆಂದೂ ಅಹರ್ನಿಶಾ ಎಂದು 'ಊ' ದೀರ್ಘ ಮತ್ತು 'ಆ' ಅಂತ್ಯ ನೀಡಿದ್ದಾರೆ.

7 ರ ವಚನದಲ್ಲಿ ಮೂಲದಲ್ಲಿದ್ದ 'ಶರೀರದೊಳಗೆ ಆತ್ಮನನಾರರೂ', ನರರು ಎಂಬ ಪದದ ವಾಕ್ಯ ಸರಿಪಡಿಸಲು 'ಶರೀರದೊಳಗೆ ಆತ್ಮನನಾರು' ಎಂದು ಬದಲಿಸಿದ್ದಾರೆ. ಹಾಗೆ ಮುಂದಿನ ವಾಕ್ಯದಲ್ಲಿದ್ದ ಬೆರಸುವ ಎಂಬ ನಿತ್ಯದ ಕೆಲಸ ಎಂಬ ಅರ್ಥ ಕೊಡುತ್ತಿದ್ದ ಪದದ ಬದಲು 'ಬೆರೆಸಿಹ'ಎಂದು ತಿದ್ದಿ, ಈಗಾಗಲೇ ಸೃಷ್ಟಿಯಾಗಿರುವ ಎಂಬ ಅರ್ಥ ಹೊರಡಿಸಿದ್ದಾರೆ.

8 ರ ವಚನದ ಅಡಗಿನೊಳಗಣ ಎಂಬ ಪದಕ್ಕೆ ಬದಲಾಗಿ ಅಡಗಿನೊಳಗೆ ಎಂದು ಮಾರ್ಪಾಡು ಮಾಡಿದ್ದಾರೆ. 'ಭೇದವ' ಎಂಬ ಪದದ ಬದಲು 'ಬೆಡಗಪ್ಪ' ಎಂದು ಬರೆದು 'ಅಚ್ಚರಿ' ವ್ಯಕ್ತ ಪಡಿಸಿದ್ದಾರೆ.

9 ರ ವಚನದಲ್ಲಿ ಪ್ರಾಣ ಪ್ರಕೃತಿಯೊಳಡಗಿದ ಭೇದವ ಎಂಬ ಮೂಲ ಪದಕ್ಕೆ ಪರ್ಯಾಯವಾಗಿ 'ಪ್ರಕೃತಿಯ ಹರಿಯದ ಭೇದವ' ಎಂದಿಟ್ಟಿದ್ದಾರೆ.

10 'ಜಡರೆತ್ತ ಬಲ್ಲರೈ' ಎಂಬುದಕ್ಕೆ 'ಜಡಜೀವಗಳೆತ್ತ ಬಲ್ಲರೈ' ಎಂದು ಪ್ರಶ್ನಿಸಿ, ಮಂಕುಬುದ್ಧಿಯವರಿಗೆ ಮಾತ್ರ ಇದು ತಿಳಿಯದು ಎಂದು ಉದ್ಗಾರವೆತ್ತಿದ್ದಾರೆ.

11 ರ ವಚನದಲ್ಲಿ ಸೊಡರು ಕೆಟ್ಟಡೆ ದೃಷ್ಟಿ ಅಡಗಿರ್ಪ ಭೇದವನು ಒಡಲು ಕೆಟ್ಟಡೆ ಜೀವವಾದೆಡೆಯಲಡಗುವುದು ಈ ಮರೆಯೆಡೆಯಣ ಭೇದವ ಭೇದಿಸಬಲ್ಲಡೆ ಪೊಡವಿಗೆ ಗುರುವಪ್ಪನೆಂದು ಮುಡಿಗೆಯ ನಿಕ್ಕಿದೆ ಪರಸಮಯಕ್ಕೆಂದು ರಾಮನಾಥ ಎಂಬ ಮೂಲ ವಚನವನ್ನು ಆಮೂಲಾಗ್ರವಾಗಿ ಬದಲಿಸಿ ಅರ್ಥ ಸ್ಪಷ್ಟತೆ ನೀಡಿದ್ದಾರೆ.
ವಚನಶಾಸ್ತ್ರ ಸಾರದ ವಿವರಣೆ ಅಡಿ ಟಿಪ್ಪಣಿಯಲ್ಲಿ ನೀಡಿದ್ದಾರೆ.

ಸೊಡರು ಕೆಟ್ಟಡೆ ಬೆಳಗಾವೆಡೆಯಲಡಗುವುದು ?
ಒಡಲು ಕೆಟ್ಟಡೆ ಆತ್ಮನಾವೆಡೆಯಲಕಗುವನು ?
ಇದರೆಡೆಯಣ ಭೇದವ ಭೇದಿಸಬಲ್ಲವರಿಗೆ
ಮುಡಿಗೆಯನಿಕ್ಕುವ ಕಾಣಾ ರಾಮನಾಥ

12 ರ ವಚನದಲ್ಲಿ ಬೇಡೆನ್ನನು ಮಾರ್ಕೊಳ್ಳೆನು, ಬೇಡೆನ್ನನು ಮಾರ್ಕೊಳ್ಳೆನ್ನನು ಹಾಗೆಯೇ ಎಲೆ ರೂಢೀಶ್ವರನ ಎಂಬ ಪದ ಅಹಂಕಾರ ಸೂಚಕವೆನಿಸಿ ಬೇಡೆನ್ನೆನು ಮಾರ್ಕೊಳ್ಳೆನು ಎಂದು, 'ಎಲೆ' ಎಂಬ ಜಾಗದಲ್ಲಿ 'ಮೇಲೆ' ಎಂದು ಬರೆದು ವಿನೀತ ಭಾವ ಹೊರಡಿಸಿದ್ದಾರೆ.

13 ರ ವಚನದಲ್ಲಿ ಮರೆಮಾತ ಬದಲಿಗೆ ಮರೆಯಮಾತು ಎಂದಿಟ್ಟು ನುಡಿವಾಗಲ್ಲದೆ ಎಂಬ ಮೂಲ ಪದ ಬಿಟ್ಟು ನುಡಿವಾಗಲಲ್ಲದೆ ಎಂದಿಟ್ಟಿದ್ದಾರೆ.

14 ರ ವಚನದ ಅಂತ್ಯದಲ್ಲಿ ಅಂಕಿತನಾಮವೇ ಬಿಟ್ಟು ಹೋಗಿತ್ತು! ಅದಕ್ಕೆ ಪೂರ್ವ ಪದ ಸೇರಿಸಿ ಪೂರ್ಣ ಗೊಳಿಸಿದ್ದಾರೆ.

15 ರ ವಚನದಲ್ಲಿ ಪಂಚಾಕ್ಷರಿ ಮರುಜೀವಣೆಯ, ಜಪಾವಳಿಯ ಎನ್ನುವುದನ್ನು ತಿದ್ದಿ ಮರುಜವಣೆಯ ಎಂದಿಟ್ಟು, ಧಾರಯನೆರೆಯೆ ಸತ್ಯವಿದು ನಿನ್ನಂತೆ ಎಂಬುದಕ್ಕೆ ಎಂಬಲ್ಲಿ 'ಧಾರೆಯನೆರೆಯಲು ಆತ ನಿನ್ನಂತೆ' ಎಂದಿದ್ದಾರೆ.

17 ರ ವಚನದಲ್ಲಿ 'ಆ ತೃಣವನಾಕಿಚ್ಚು ನುಗಿದಂತೆ', ಕೆಂಡ ನುಂಗಿದಂತೆ ಎಂಬ ಪದ ಕೈಬಿಟ್ಟು ಆ ತೃಣವ ಕೆಂಡ ನುಂಗಿದಂತೆ ಮತ್ತು ತನುವೆಂಬ ತೃಣವ ತಂದಿರಿಸಿದರೆ ಎನ್ನಲಾಗದೆ ತನುತೃಣವನಿಳುಹಿದರೆ ಎಂದು ಮಾರ್ಪಾಡು ಮಾಡಿದ್ದಾರೆ.

19 ರ ವಿಸ್ತಾರವಾದ ವಚನದಲ್ಲಿ ಸುಲಭ ಗ್ರಹಿಕೆಗಾಗಿ ಹೆಸರೋದಿತ್ತು, ಅದು, ಹೊಳಪ - ಎಂಬ ಮೂರು ಪದವನ್ನು ಜೋಡಿಸಿ ಲಿಂಗಲೀಲಾ ವಿಲಾಸ ಚಾರಿತ್ರದ ವ್ಯಾಖ್ಯಾನ ನೀಡಿದ್ದಾರೆ.

27 ರ ಕ್ರಮಸಂಖ್ಯೆಯ :

ಎನ್ನೊಡಲಾದರೆ ಎನ್ನಿಚ್ಛೆಯಲಿರದೆ
ನಿನ್ನೊಡಲಾದರೆ ನಿನ್ನಿಚ್ಛೆಯಲಿರದೆ
ಅದು ಎನ್ನೊಡಲೂ ಅಲ್ಲ, ನಿನ್ನೊಡಲೂ ಅಲ್ಲ,
ನೀ ಮಾಡಿದ ಜಗದ ಬಿನ್ನಾಣದೊಡಲು ಕಾಣಾ ರಾಮನಾಥ

ಎಂಬ ಮೂಲ ವಚನವೇ ಅರ್ಥಪೂರ್ಣವಾಗಿತ್ತು. ಆದರೆ ಗ್ರಂಥ ಸಂಪಾದಕರು ಅದನ್ನು ಬಿಟ್ಟು ಅದೇಕೋ ಎನ್ನಿಚ್ಚೆಯೊಳಿಹುದೆ, ನಿನ್ನಿಚ್ಚೆಯೊಳಿಹುದು ಎಂಬ ಪದವಿಟ್ಟರೋ ತಿಳಿಯದು, ಆದರೆ ಮೂಲ ವಚನದ 'ಛ' ಮಹಾಪ್ರಾಣದ ಒತ್ತಕ್ಷರ ಕೈಬಿಟ್ಟು 'ಚ' ಅಲ್ಪ ಪ್ರಾಣ ಒತ್ತಕ್ಷರ ಬಳಕೆ ಸ್ವಾಗತಾರ್ಹ.

24 ರ ವಚನದಲ್ಲಿದ್ದ ಮೂಲ 'ವ್ಯಾ' ಪದ ಕೈಬಿಟ್ಟು 'ದ್ರವ್ಯದ' ಮೋಹ ಸೇರಿಸಿ, ಮಣ್ಣ ಹೊಯ್ದು ಕೆಡಿಸಿದೆಯಯ್ಯ ರಾಮನಾಥ ಎಂಬ ಅಂತ್ಯವನ್ನು ಅರ್ಥಸ್ಪಷ್ಟತೆಗಾಗಿ ಬಾಯಲ್ಲಿ ಮಣ್ಣ ಹೊಯ್ದು ಕೆಡಿಸಿದೆಯ ರಾಮನಾಥ ಎಂಬ ಅಂತ್ಯವನ್ನು ಅರ್ಥ ಸ್ಪಷ್ಟತೆಗಾಗಿ ಬಾಯಲ್ಲಿ ಮಣ್ಣ ಹೊಯ್ದು ಕೆಡಿಸಿದೆ ಎಂದು ಮೃತ್ಯು ಬಂದ ಸೂಚನೆ ನೀಡಿ ಗಣ ಭಾಷಿರತ್ನ ಮಾಲೆಯ ಪಂಚಾಗ್ನಿಯೇ ಐದು ಬಗೆಯ ಕಿಚ್ಚು ಎಂದು ಉಲ್ಲೇಖಿಸಿ ಸಂಬಂಧ ಸೂಚಿಸಿದ್ದಾರೆ.

25 ರ ವಚನದಲ್ಲಿ ವಿವರಿಸಲ್ಪಟ್ಟಿರುವ ಪಂಚಮಹಾ ಪಾತಕಗಳ ವಿವರಣೆ ಕೊಡುವಲ್ಲಿ ಇದ್ದ ಪಾರದ್ವಾರಿ ಎಂಬ ಅರ್ಥಹೀನ ಪದ ಅಳಿಸಿ 'ಪರದಾರ' ಪದವಿಟ್ಟು ಪಂಚಕ್ಕೂ 'ಪಂಚಮ' ಕ್ಕೂ ಅಂತಹ ವ್ಯತ್ಯಾಸವಿಲ್ಲದ ಮ ಅಕ್ಷರವನ್ನು ಆವರಣಥೊಳಗಿಟ್ಟದ್ದಾರೆ.

26 ರ ವಚನದ ಕಚ್ಚುವರು , ಬಗಳುವರು ಎಂಬಲ್ಲಿ ಬ > ಬೊ ಮಾಡಿ ಬೊಗುಳುವವರನ್ನು ತಿವಿದಿದ್ದಾರೆ.

29 ರ ವಚನದಲ್ಲಿ ಪಟ ಕರ್ಮ ಸಂಸಾರ ಎಂದಿದ್ದು, ಪಟ ? ಎಂದರೇನು ತಿಳಿಯದ ಕಾರಣ ಕಷ್ಟ ಪದವಿಟ್ಟು ಓದುಗರ ಕಷ್ಟ ದೂರ ಮಾಡಿದ್ದಾರೆ.

30 ರ ವಚನದ ಬರುಶಠಗ ವನ್ನು ಬರುಸಟೆಗ ಮಾಡಿ ಸುಳ್ಳು ಗಾರನ ಬಗ್ಗೆ ಎಚ್ಚರಿಸಿದ್ದಾರೆ.

32 ರ ವಚನದಲ್ಲಿ ದೇವರನ್ನು ನಂಬದವನ ಬಾಳುವೆ ಹೊಲೆಯ ನಾಯಿ ಗಿಂತ ಕೀಳು ಜನ್ಮವೆಂಬ ಖಂಡನೆಯನ್ನು ಜಾತಿ ಸೂಚಕವಾಗುವುದೆಂಬ ಕಾರಣಕ್ಕೆನೋ ? ಕೈಬಿಟ್ಟು, ನಾಯಿಗೆ ಹೋಲಿಸಿರುವುದು ಯುಗಧರ್ಮ.

34 ರ ವಚನದ ಹೊಳ್ಳ ಕುಟ್ಟ ಕೈ ಹೋಟೆಯಾದಂತೆ ಎಂದಿರುವುದು ಹೋಟೆ ಎಂದರೆ ಜೊಮ್ಮು ಹಿಡಿದು ಸ್ಪರ್ಶ ಜ್ಞಾನ ಕಳೆದು ಕೊಂಡು ಕಲ್ಲಾದಂತೆ ಎಂಬ ಅರ್ಥವಿರಬಹುದು. ಇಲ್ಲದಿದ್ದರೆ 'ಹೊಟ್ಟಾದಂತೆ' ಎಂಬ ಮೂಲ ಪದವೇ ಸೂಕ್ತ.

37 ರ ವಚನ ದಲ್ಲಿ ಉದಾರ ವ್ಯಕ್ತಿಗಳ ಪ್ರಸ್ತಾಪಮಾಡಿ ಇರಿಯ ಬಲ್ಲರೆ ಎಂಬ ಶಬ್ದ ಅರ್ಥಹೀನವಾಗುವುದರಿಂದ ಈವಡೆ ಪದವಿಟ್ಟು ವಚನದ ಆಶೆಯ ಪೂರ್ಣಗೊಳಿಸಿದ್ದಾರೆ.

41 ರ ವಚನದಲ್ಲಿ ಶರಣರ ಮಹಿಮೆ ಕೊಂಡಾಡುತ್ತಾ ಕರ್ತಾರ ನಿನಗೆ ಕರವೆತ್ತಿ ಪೊಡೆಪಡುವ ?! ಎಂಬ ಪದ ಬಿಟ್ಟು ಹೊಡೆವಡುವ ಪದವಿಟ್ಟು ನಮಸ್ಕಾರ ದ ಅರ್ಥ ಹೊರಡಿಸಿದಕ್ಕೆ ನಮಸ್ಕಾರ. ಇದೇ ಅರ್ಥ ಕೊಡುವ ಉತ್ತಂಗಿ ಚನ್ನಬಸಪ್ಪನವರ ಸರ್ವಜ್ಞನ ವಚನ ದ ಹೋಲಿಕೆ ನೀಡಿದ್ದಾರೆ.

43 ರ ವಚನದಲ್ಲಿ ಉದರಂಭಣಕ್ಕಾಗಿ ಶರಣರ ವೇಷ ತೊಟ್ಟ ಧೂರ್ತ ರನ್ನು ಎನ್ನಡೆಗೆ ತೋರದಿರಾ ಎಂಬ ಜಾಗಕ್ಕೆ 'ನೆನಗೊಮ್ಮೆ' ಒದವಿಟ್ಟುದುದು ಅಂತಹ ವ್ಯತ್ಯಾಸವೇನಿಲ್ಲ.

45 ರ ವಚನದಲ್ಲಿ ತೋರ್ಪಡಿಕೆಗಾಗಿ ಮಾಡುವ ಭಕ್ತಿ ಭೋಜನದ ವಿವರಣೆ ನೀಡುತ್ತಾ ಅಂತಹುದು ತೊತ್ತಿನ ಕೂಟ ದತ್ತೂರಿಯ ಎಂಬ ನೂತನ ಪದವಿಟ್ಟು, ಮೂಲದ ಕೂಟದತೂರ್ಯ, ಕೂಟತೊರೆಯನು ಪದ ಬಿಟ್ಟಿರುವುದು ಸೂಕ್ತವಾಗಿದೆ.

47 ರ ವಚನದ ಅನುರೂಪವಲ್ಲದ ದಾಂಪತ್ಯ ವಿಡಂಬನೆ ಮಾಡುತ್ತಾ ಅಂತಹವರ ಬದುಕು ಸತ್ತನಾಯ ತಂದು ಅಟ್ಟಡ, ತಂದಟ್ಟದ ಎಂಬ ಮೂಲ ಪದದ ಜಾಗಕ್ಕೆ ತಂದಟ್ಟ ಪದವಿದ್ದರೂ ತಂದು ಅಟ್ಟ ಮಹಡಿಯೋ ? ಬೇಯಿಸದ ಮಾಂಸವೋ ? ಎಂಬ ಸಂಶಯ ಬರುತ್ತದೆ.

51 ವಚನದಲ್ಲಿ ಗುರು ನಿರೂಪವ ಮಾಡರು ಎಂಬುದು ಮರೆದು ತಿದ್ದು ಪಡಿ ಸರಿಯಾಗಿದ

53 ರ ಪದ್ಯದಲ್ಲಿ ಎಂಜಲ ತಿನ್ನುವವನ ನಡವಳಿಕೆ ಖಂಡಿಸುತ್ತಾ ಭವದಲ್ಲಿ ಬಳಲುವನು ಅಂತಹವನ ಎಂಬ ಪ್ರಕ್ಷಿಪ್ತ ಪದ ತೆಗೆದು ಆ ಕಾಲದ ಬಳಲುವನೆಂದವನ ಪ ದ ಜೋಡಣೆ ಭಾಷಾ ದೃಷ್ಟಿಯಿಂದ ಸೂಕ್ತವಾಗಿದೆ.

56 ರ ಪಚನದಲ್ಲಿ ಸ್ತ್ರೀಯರ ಮೇಲಣೆಚ್ಚೆ ಬದಲಿಗೆ ಸ್ತ್ರೀ ಯರಿಚ್ಚೆ ಬಳಸಿರುವುದು ಸೂಕ್ತವಾಗಿದೆ. ಹೆಣ್ಣಿನ ವಾಂಛೆಗೆ ಮೇಲಿಚ್ಚೆ ಕೆಳಗಿಚ್ಚೆ ಎಂಬ ಪಂಗಡವಿಲ್ಲ. ಒಮ್ಮೆ ಬಯಕೆ ಬಂದರೆ ತೀರಿತು.

58 ರಲ್ಲಿ ಶಿವಭಕ್ತರು ಅಂದು ಧರಿಸುತ್ತಿದ್ದ ಮಾಲೆಯ ಬಗ್ಗೆ ಹೇಳುತ್ತಾ, ಮಣಿಯ ಕಟ್ಟಲೆ ಬೇಕು ಎಂಬ ಮೂಲಪದ ಕಾನೂನು - ಕಡ್ಡಾಯ ಎಂಬ ಅರ್ಥ ಬರುವುದೆಂದು ಕಟ್ಟಲು ಬೇಕು ಎಂಬ ಪದವಿಟ್ಟಿರುವರು.

59 ರ ವಚನದಲ್ಲಿ ಧರ್ಮದ ವಿಶ್ಲೇಷಿಸುವ ಸಾಲಿನ ಧರ್ಮಗಳವನಿಕ್ಕಿ ಎಂಬ ಪೂರ್ವ ಪದ ಕೋಲು ಎಂಬ ಅರ್ಥ ಕೊಡುವುದರಿಂದ, ಭೂಮಿ ಉಳುವ ಮರದ ಸಾಧನವಾದ ನೇಗಿಲಿಗೆ ಮೇಣಿ, ಗುಳ ಎಂಬ ಪದವನ್ನಿಟ್ಟು ಸ್ಪಷ್ಟತೆ ತಂದಿದ್ದಾರೆ.

60 ರ ವಚನದಲ್ಲಿ ಬರುವ ಹದಿನೆಂಟು ಎಂಬುದು ಜಾತಿ ಹೆಸರಿನಲ್ಲಿ ಹೊಡೆದಾಡುವ ಬಂಧನ ಎಂದು ಶೋಧಿಸಿದ್ದಾರೆ.

61 ರ ವಚನದಲ್ಲಿ ಬರುವ ಕಬ್ಬಿನ ಎಂಬ ಮೂಲಪದ ಹುಲ್ಲಿನ ಜಾತಿಯ ಸಿಹಿ ಗಿಡ ಎಂಬ ಅರ್ಥ ಕೊಡುವುದರಿಂದ ಕಬ್ಬುನ ಪದವಿಟ್ಟು ಕಬ್ಬಿಣ ಮಾಡಿದ್ದಾರೆ.

64 ರ ವಚನದ ಮೂಲಪದ ನಿಮ್ಮುವನಿರುವುದು ದ ಬದಲು ನಿಮ್ಮುವ ಒಲಿವುದ ಏಕಿಟ್ಟರೋ ತಿಳಿಯದು. ಇವುಗಳ ನಡುವೆ ಭಾರಿ ವ್ಯತ್ಯಾಸವಿಲ್ಲ.

65 ರ ವಚನದಲ್ಲಿ ಅಲ್ಲಮ ಮತ್ತು ಸರ್ವಜ್ಞನು ಹೇಗೆ ಪ್ರಭಾವಿತರಾಗಿದ್ದಾರೆ ಎಂಬ ಹೋಲಿಕೆಯ ವಚನ ಇದೆ.

66 ರ ವಚನದಲ್ಲಿ ಎಲೆ ಪೈರೈ ದ ದಿ ರಾಗೆ ಬಿಟ್ಟು ಹಳಗನ್ನಡ ಪದ ಪಯಿಯಿರೈದದಿರೆದದಿ ಬೀಸುವ ವಾಯು ನೇತನ ಪದ ಬಿಸುವ ತೆಗೆದು ಅಂದಿನ ಸೂಸುವ ಪದ ಜೋಡಣೆ ಸರಿ. 68, 69 ರ ವಚನಗಳು ಗೀತೆಯಂತಿದ್ದು, ಗಾಯಕರ ಹಾಡುಗಾರಿಕೆ ಅನ್ನುಸರಿಸಿ ಬರೆದು ಮಧ್ಯೆ ಮಧ್ಯೆ ಪಲ್ಲವಿ ಜೋಡಿಸಿ ಪ್ರತ್ಯೇಕಗೊಳಿಸಿದ್ದಾರೆ. ಈ ವಚನಕ್ಕೆ ಬಿರುದಾವಳಿ ಸ್ತೋತ್ರದ ವಿವರಣೆ ನೀಡಿದ್ದಾರ.

73 ರ ವಚನದ ಸಕ್ಕರೆಯು ಮಡುವು ಉ ಕಾರಂತ್ಯದ ತೆಗೆದು 'ಸಕ್ಕರೆಯ' ಅಕಾರಂತ್ಯವಿಟ್ಟು ಅರ್ಥ ಸುಲಭಗೊಳಿಸಿ ಸರ್ವಜ್ಞನ ವಚನದ ಮೇಲಾದ ಪ್ರಭಾವ ತಿಳಿಸಿದ್ದಾರೆ.

74 ರ ವಚನದ 'ಜಗಜ್ಜೀವನ' ಆಧುನಿಕ ಪದ ವಿಸರ್ಜಿಸಿ 'ಜಳನ ಜೀವನವ' ಪದ ತಂದು, ಮೂಲದ ಮುಚ್ಚಿದ ಪದದ 'ದ' ಬಿಟ್ಟು 'ಮುಚ್ಚಿ' ಮಾಡಿದ್ದಾರೆ.

75 ನಿಷ್ಠೆಯುಳ್ಳ ಭಕ್ತ ಅಡವಿಯಲ್ಲಿದ್ದರೂ ಅದು ಪಟ್ಟಣ. ನಿಷ್ಠೆ ಇಲ್ಲದವ ಪಟ್ಟಣದಲ್ಲಿದ್ದರೂ ಅಡವಿ. ಎಂಬ ಪದದಲ್ಲಿ 'ನಟ್ಟಡವಿ' ತಂದು ದಾರಿಕಾಣದ, ಕಂಗಾಲು ಅರ್ಥ ತಂದಿರುವುದು ಸೂಕ್ತವಾಗಿದೆ.

76 ರ ಜನಪ್ರಿಯ ವಚನ ಇರುವೆಯ ಜೀವನಕ್ಕೆ ಮಾನವ ಜೀವನ ಹೋಲಿಸುತ್ತಾ ತೆರನರಿದು ಹೊಸ ಪದವೆಂದು 'ತೆರನೇನು' ಪದವಿಟ್ಟು ಸೂಕ್ತ ವಾಕ್ಯ ಮಾಡಿದ್ದಾರೆ.

77 ರ ವಚನದ ಒರೆದು ನೋಡುವ ಚಿನ್ನದಂತೆ ಎಂಬ ಸಾಲೆ ಸಾಕಾಗಿತ್ತು. 'ಸುವರ್ಣದ' ಪುನರುಕ್ತಿ ಬೇಕಾಗಿರಲಿಲ್ಲ. ಗ.ಭಾ.ರ ಮಾಲೆಯಲ್ಲಿರುವ ಅಕ್ಕನ ವಚನಕ್ಕೆ ಮಾದರಿ ದಾಸಿಮಯ್ಯ.

79,80,81 , ಈ ಕ್ರಮಸಂಖ್ಯೆ ಮತ್ತು ಇನ್ನೂ ಕೆಲವು ವಚನಗಳಲ್ಲಿಲ್ಲದ ಅಂಕಿತ ನಾಮವಿಟ್ಟಿದ್ದಾರೆ.

82 ರ ವಚನದಲ್ಲಿ ಸದ್ಭಕ್ತನ ಜಾತಿ ನೋಡಬಾರದು, ಕೆಳ ಜಾತಿಯ ಭಕ್ತನನ್ನು ಜಾತಿ ದೃಷ್ಟಿಯಿಂದ ಹೀನವಾಗಿ ನೋಡಿ ಅಕುಲಜ , ಎಂದೊಡೆ, ಮೂಲಪದವೇ ಸರಿ ಇತ್ತು. ಅಕ್ಕುಲಿಜ ಅಗತ್ಯವಿರಲಿಲ್ಲ.

86 ರ ವಚನದನಂತ್ಯದಲಿ ಬಂದಿದ್ದ ಮಹಲಿಂಗನ ಏಕೋತ್ತರ ಶತಸ್ಥಲ ದ ಬದಲು ರಾಮನಾಥ ನನ್ನಿಟ್ಟು ದಾಸಿಮಯ್ಯನ ಕರ್ತೃತ್ವ ಸಾರಿದ್ದಾರೆ?

87 ರಲ್ಲಿ ಸರ್ವಾಂಗಗಳು ಶಿವನಿಗೆ ಮೀಸಲು ಎಂಬ ವಿವರವಿದ್ದು, ಆರನೆ ಇಂದ್ರಿಯವಾದ ಮನಸ್ಸಿನ ಪ್ರಸ್ತಾಪವಿಲ್ಲದ್ದು ಕೊರತೆ ಎನಿಸಿ ತನು ಜೊತೆಗೆ ಮನ ತಂದಿರುವುದು ಯೋಗ್ಯವಾಗಿದೆ.

88 ರ ವಚನದಲ್ಲಿ ಒಪ್ಪಚ್ಚಿ ದೇಹಾರವ ಮಾಡುವಿರಯ್ಯ ಎಂಬ ಮಾಡುವ ಜನರ ವಿವರಣೆ ಅನಗತ್ಯ. ಮಾಡಿರಯ್ಯ ಎಂದು ಕಿವಿಮಾತು ಹೇಳಿರುವುದು ಸರಿ. ಪಾಲನೆ ಮಾಡದಿರುವವರ ಬಾಳು ವ್ಯರ್ಥ. ಇದನ್ನೇ ಹೋಲುವ ಅಂಬಿಗರ ಚೌಡಯ್ಯನ ವಚನ ವೊಂದಿದೆ.

90 ರ ವಚನದ ಮೂಲ ಪದ ಅಂಬಿಲೇ, 'ಅಂಬಿಲಿ' ತೊಡಕಾಗುವುದರಿಂದ ಅಂಬಲಿ ರಾಗಿ ಗಂಜಿ ಪದವಿಟ್ಟಿದ್ದಾರೆ. ಸರಿ.

91 ರ ವಚನದಲ್ಲಿ ಗೋವು ಪೂಜ್ಯ. ವ್ಯವಸಾಯಕ್ಕೆ ಅಗತ್ಯವಾದ ಈ ದೈವವನ್ನು ಕೊಲ್ಲಬಾರದು ಎಂಬ ಕಿವಿಮಾತಿನೊಂದಿಗೆ ಹೆಳವನ ಮೂಲಪದ ಅಂಗವಿಕಲ ಎಂಬ ಅರ್ಥ ಕೊಡುವುದರಿಂದ ಏಳೆವನ, ಸಾಗಿಸುವವನು ಎಂಬರ್ಥದ ಬದಲಾವಣೆ ಸೂಕ್ತ.

91, 93, 94, ರ ವಚನಗಳಿಗೆ ಅಂಕಿತನಾಮ ಇಟ್ಟಿದ್ದಾರೆ.

102 ರ ವಚನಹದ 'ಆ' ಪ್ರತ್ಯಯವನ್ನು ಸಿದ್ದವೀರಾಚಾರ್ಯರು ಸಂಪಾದಿಸಿದ ಗ್ರಂಥವನ್ನು ಸ್ಮರಿಸಿದ್ದಾರೆ.

107 ರ ವಚನದ ವಿವರಣೆಯನ್ನು ವಚನ ಶಾಸ್ತ್ರ ಸಾರ ಸಂಪುಟದ ಪೂವಾರ್ಧ ದಿಂದಲೂ 10 8 ಮತ್ತು 110 ರ ವಚನಕ್ಕೆ ಲಿಂಗಲೀಲಾ ವಿಲಾಸ ಚಾರಿತ್ರ ದ ವಿವರಣೆಯನ್ನು ಅಡ್ಡಿ ಟಿಪ್ಪಣಿಯಲ್ಲಿ ಸೇರಿಸಿದ್ದಾರೆ.

110 ರ ವಚನಕ್ಕೆ ವ.ಶಾ.ಸಾ. ಸಂಪುಟ ಮತ್ತು ಲಿಂಗಲೀಲಾವಿಲಾಸ ಚಾರಿತ್ರ ದ ವ್ಯಾಖ್ಯಾನ ಉಲ್ಲೇಖಿಸಿ ಹೆಚ್ಚಿನ ವಿವರಣೆ ನೀಡಿದ್ದಾರೆ.

112 ರ ವಚನ ಭೂಮಿ ಅಗೆದು ಚಿನ್ನ ತೆಗೆವ ಪರಿ ತಿಳಿಸುತ್ತಾ 'ಮಣ್ಣುಡುಗಿ ಹೆಡಿಗೆಯ ತುಂಬಲಾ' ಎಂಬ ಮೂಲ ವಾಕ್ಯ ಬಿಟ್ಟು 'ಮಣ್ಣುವ ಹೆಡಿಗೆದುಂಬಲಾ' ಸಖ್ಯ ಸುಖವನ್ನು ತಿಳಿಸಿದ್ದಾರೆ.

113ರ ವಚನದಲ್ಲಿ 'ಜಾತಸ್ಯ ಮರಣಂ ಧ್ರುವ' ಎಂಬಂತೆ ಹುಟ್ಟಿದವನು ಸಾಯಲೇ ಬೇಕು. ಅದಕ್ಕಾಗಿ ಚಿಂತಿಸಬೇಕಿಲ್ಲ. ಆದರೆ ಅಸಮೃತ್ಯು ಸಲ್ಲ. ಮಾರಿಯ ಮೃತ್ಯು ಏನೆಡೆ ಮಾರಿಯ 'ಪ' ಮೃತ್ಯು ಬಿಟ್ಟು ವಿಶೇಷ ಅರ್ಥ ಹೊರಡಿಸಿ 'ನಿನ್ನೊಲವು' ತೆಗೆದು ನಿನ್ನೊಷ್ಟಲೆಂದು ಇಟ್ಟಿರುವುದು ಉಚಿತವಾಗಿದೆ. ವಚನ ಹೀಗೆ ತ್ರಿಪದಿಯೂ ಆಗಬಹುದು ಎಂಬ ಪಾಠ ನೀಡಿರುವುದು ಅಂದಿದ್ದ ತ್ರಿಪದಿಯ ಅಥವಾ ತ್ರಿಪದಯಾಗುವುದರ ಲಕ್ಷಣ ರೂಪ ಚೇತೋಹಾರಿ.

119 ರ ವಚನದಲ್ಲಿ ಹಜ್ಜೆಯ ಕೆಳಗೆ ಎಂಬ ಸಾಲಲ್ಲಿ ಯಾರ ಹಜ್ಜೆ ? ಎಂಬ ಪ್ರಶ್ನೆ ಉಂಟಾಗದಿರದು. ಅದಕ್ಕೆ 'ನೀನಿಂದ ಹಜ್ಜೆ' ಕೆಳಗೆ ಸರಿಯಾದ ಜೋಡಣೆ.

122 ರ ವಚನದ ಜಗದ ಮನುಜರು ಸೋಗೆಗ ನಂತಿಪ್ಪರು. ಎಂಬ ವಾಕ್ಯದ ಮುಂದೆ ಸೋಗೆಗಳನಾಡಿಸುವ ಓಜ - ಹಳಗನ್ನಡದ ಪದ ಬಳಸಿ ವಿವರ ನೀಡಿದ್ದಾರೆ.

123 ರ ವಚನದಲ್ಲಿ ಬರುವ ಆಡಬಾರದ, ಸೂಡಬಾರದ, ಹಿಡಿಯಬಾರದ ಬಯಲಿಲ್ಲಿ ಕದಿಯಬಾರದ

ಮೂಲ ಪದ ತೆಗೆದು ನುಡಿಯ ಬಾರದ ಪದ ಬಳಕೆ ಪ್ರಸ ಬದ್ಧವಾಗಿ (ಅನುಪ್ರಾಸ) ಕೂಡಿದ್ದು ತಕ್ಕುದಾಗಿದೆ. ವ. ಶಾ. ಸಾ. ಸಂಪುಟ ಮತ್ತು ಲಿಂಗಲೀಲಾ ವಿಲಾಸ ಚಾರಿತ್ರದ ವಿವರಣೆಯ ನೆರವು ಪಡೆದಿದ್ದಾರೆ.

136 ರ ವಚನದಿಂದ ಪ್ರಭಾವಿತನಾಗಿರುವ ಬಸವಣ್ಣನ ವಚನವನ್ನು ಹೋಲಿಕೆಗೆ ನೀಡಲಾಗಿದೆ.

127 ರ ವಚನದ ಶಿವನು ಭಕ್ತರ ಪರಾಧೀನನಾಗಿ ಹೇಗೆಲ್ಲಾ ವರ್ತಿಸಿದ ಎಂಬುದರ ವಿವರಣೆ ನೀಡುವ ವಚನದಲ್ಲಿ ಚೆನ್ನನ, ಕೆಂಬಾವಿ ಭೋಗನೆಂಬ ಶರಣರ ಹೆಸರು ಪ್ರಸ್ತಾಪಿಸುತ್ತಾ ಗುಂಡಯ್ಯನ ಹೆಸರು ಇಲ್ಲದ ಕಾರಣ ವೃತ್ತಿಯೊಂದಿಗೆ ಆ ಮಹಾಮಹಿಮನ ಹೆಸರು ಸೇರಿಸಿ 'ಐತಿಹ್ಯ' ನೆನಪಿಸಿದ್ದಾರೆ.

130 ರ ವಚನದಲ್ಲಿ ಅನುಭಾವಿಗಳ ಮಹತ್ವ ಹೇಳುತ್ತಾ ಅಂತಹವರನ್ನು ಕಂಡರೆ ಕಂಡಾಗ, ಕಂಡರೆ ಅನ್ನುವಷ್ಟು ವಿರಳವೇ ಅವರ ಸಂಖ್ಯೆ ? ಮೋಕ್ಷ ಬೇಕೆಂದರೆ ಅಂತಹವರನ್ನು ನಾವೇ ಬೇಗ ಹುಡುಕಿ ಕಾಣಬೇಕು ಎಂಬರ್ಥದ 'ಕಂಡು ತುರ್ಯ' ಪದ ಬಳಕೆ ಸೊಗಸಾಗಿದೆ.

ಎಸ್. ಉಮಾಪತಿಯವರ 'ಪರಮ ಮೂಲ ಜ್ಞಾನ' ಎಂಬ ಗ್ರಂಥದಲ್ಲಿ ಸಿಕ್ಕಿದ ಒಂದು ವಚನವನ್ನೂ ಸಂಶೋಧಕರು ಬಿಟ್ಟಿಲ್ಲ.

133 ಈ ವಚನದ ಅಂಧಕನು ಕಳನ ಹೊಕ್ಕಂತೆ ಎಂಬ ಸಾಲಿನಲ್ಲಿ ಸರ್ವಜ್ಞ ತಿಳಿದ ಕೊಳವೋ ? ಧಾನ್ಯ ಒಕ್ಕುವ 'ಕಣ' ವೋ ಎಂಬ ಸಂಶಯ ಉಂಟಾಗುತ್ತದೆ.

138 ರ ವಚನದ ಶಿವಭಕ್ತಿ ಇಲ್ಲದವರು ನರಕದಲಿ ಬೀಳ್ವುದು 'ಕಿರುಗಹಿ ಅಲ್ಲ', ಅದು 'ಕರುಗಹಿ' ದೊಡ್ಡ ನಷ್ಟ ! 133 ಮತ್ತು 136 ಈ ಎರಡೂ ವಚನಗಳಿಂದ ಸರ್ವಜ್ಞನೂ, ಅಲ್ಲಮನೂ ಪ್ರಭಾವಿತರಾಗಿರುವ ಸಾಕ್ಷಿ ಇದೆ.

135 ರ ವಚನದಲ್ಲಿ ಜಗವೆಲ್ಲಾ ರಾಮನಾಥ ವಾಕ್ಯದೆಡೆಯಲಿ 'ನೀನಾಗಿ ಇಪ್ಪೆ' ಅಗತ್ಯ ವಿರಲಿಲ್ಲ. ಅರ್ಥ ಬಾಧೆ ಇರುತ್ತಿರಲಿಲ್ಲ. ಪ್ರಾಭಾವಿತ ಹೋಲಿಕೆಗೆ ಸರ್ವಜ್ಞನ ತ್ರಿಪದಿ ನೀಡಲಾಗಿದೆ.

136 ಇತ್ತ ಬಾ ಎಂಬ ವ್ಯಕ್ತಿ ಸದ್ಭಕ್ತನ ಮನೆ ಎಂಟ ಗುಣವಾಚಕ ಬೇಡ ಎಂಬ ತೀರ್ಮಾನ ಸರಿ. ಅಂತಹ ಭಕ್ತ 'ಸದ್ಭಕ್ತ' ನೆಂಬ ಬಗ್ಗೆ ಸಂಶಯವಿಲ್ಲ.

138 ಈ ವಚನದ ಆರಂಭದಲ್ಲಿ ಊರ ಮಾಡುವವನ ಊರ ಮಾಡುವ ಪದದ ಬದಲು 'ಊರಮಾಡದ' ಎಂಬ ತಿದ್ದುಪಡಿ ಮಾಡಿ ಸಾಗರವಾಗಲರಿಯದು ಎಂಬುದು 'ಸಾರವಾಗ' ರೂಪ ಪಡೆದು ಸತ್ವಯುತವಾಗಿದೆ.

139 ರ ವಚನದಲ್ಲಿ ಪುಣ್ಯ ಕ್ಷೇತ್ರದಲ್ಲಿ ಹುಟ್ಟಿದವನು ತಪ್ಪಿತಸ್ಥನಲ್ಲ. ಹುಟ್ಟಿ ಉಣ್ಣದ ವನು ವಿಶೇಷ ಅರ್ಥ ಹೊಮ್ಮಿಸಿದೆ.

141 ರಲ್ಲಿ ಬಾಹ್ಯ ಆಡಂಬರವನ್ನು ಖಂಡಿಸುತ್ತಾ , ಕಾಯಕ ಮಹತ್ವ ತಿಳಿಸುತ್ತಾ, ಮಡಿದು ಗೋಸಿಯ ಕಟ್ಟಿದರೇನು ಎಂಬುದು ನುಡಿದು ಗೋಷ್ಠಿಯ ಕಟ್ಟಿದಡೇನು, ಎಂದಾಗಿದೆ. ಸತ್ತವರ ನೆನಪಿಗೆ ಸಾಲ ಮಾಡಿ ಕಟ್ಟುವ ಗೋರಿ (ಸಮಾಧಿ) ಇರಬಹುದೇ ಎಂಬ ಸಂಶಯ ಮೂಡುತ್ತದೆ.

## ಅಪ್ರಸ್ತುತ ವಚನಗಳು

143 ರಿಂದ 150 ರವರೆಗೆ ಕೆಲವು ವಚನಗಳನ್ನು ತಕ್ಕುದಲ್ಲ ವೆಂದು ವಿಂಗಡಿಸಿ ಅಪ್ರಸ್ತುತ ವೆಂದಿದ್ದಾರೆ.

143 ನಿರಭಿಮಾನಹೇಗೋ ಹಾಗೆ ದುರಭಿಮಾನವು ಅಪಾಯಕಾರಿ. ಏಕದೇವೋ ಪಾಸನೆ ಶರಣರ ಮೂಲ ತತ್ವಗಳಲ್ಲಿ ಒಂದು. ಹಾಗೆಯೇ 'ದೇವನೊಬ್ಬ ನಾಮ ಹಲವು' ಎಂಬ ನಂಬಿಕೆಯಿದ್ದರೂ ಬಗೆ ಬಗೆಯ ಜಾತಿ, ಮತ್ತು ಧರ್ಮ ಇರುವ ನಮ್ಮ ಸಮಾಜ ದಲ್ಲಿ ಬೇರೆ ಬೇರೆ ದೇವರನ್ನು ಪೂಜಿಸುವವರನ್ನು ನಾಯಿ ಗೆ ಹೋಲಿಸಿರುವುದು ಸರಿಯಲ್ಲ.

"ಈಶ ನಿಮ್ಮ ಪೂಜಿಸಿದ ಬಳಿಕ ಅನ್ಯ ದೈವಂಗಳಿಗೆ ಹೇಸಿರ ಬೇಕು" ಎಂಬ ಹೇಳಿಕೆ ವಿಪರೀತದ ಮಾತಾಯಿತು.

144 ಈ ವಚನದಲ್ಲಿ ಗೃಹಸ್ಥನ ಮನೆಯ ಊಟದ ಬಗ್ಗೆ ಒಳ್ಳೆಯ ಮಾತಾಡುವುದು ತಪ್ಪು. ಆದರೆ ಸಂಸಾರವಂತನಿಗೆ ಮುಕ್ತಿ ಹೇಗೆ ? ಗೊಂದಲದ ಕಾರಣ ಕೊಟ್ಟಿರಬೇಕು.

145 ಜಾತಿಯತೆಯ ವಿರುದ್ದ ಹೋರಾಡಿದ, ಧುರ್ಬಲ ವರ್ಗದ ದಾಸಿಮಯ್ಯ ಹೊಲೆಯರ ಮನೆಯ ಕೂಳಿಗೆ ಹೋಲಿಸಿ ಜರಿದಿರುವುದ ಒಂದು ವರ್ಗಕ್ಕೆ ನೋವಾಗುವ ಕಾರಣ ಕೈಬಿಟ್ಟಿರಬೇಕು.

146 ಈ ವಚನದಲ್ಲೂ ಸಹ ಭವಿಯ ಮನೆಯಲ್ಲಿ ಒಡಲಿಚ್ಚೆಗೆ ಉಣ್ಣುವ ಅನ್ನ, ಮೃಷ್ಟಾನ್ನವಾದರೂ ಅದನ್ನು 'ಅಮೇಧ್ಯ' ಕ್ಕೆ ಹೋಲಿಸಿರುವುದು ಖಂಡನಾರ್ಹ ಎಂಬ ಕಾರಣಕ್ಕೆ ಹೊರಗಿಟ್ಟಿರಬಹುದು.

147 ರ ವಚನದಲ್ಲಿ ಹಸಿವಾಯಿತೆಂದು ಉಣ್ಣುವ ಅನ್ನ ವಿಷಕ್ಕೆ ಸಮಾನ! ಅದರಿಂದ ನರಕಪ್ರಾಪ್ತಿ.

1 48 ರ ವಚನದಲ್ಲಿ ಶಿವ ಭಕ್ತನನ್ನು ಹಂದಿಗೆ ಹೋಲಿಸಿರುವುದು , 149 ರ ವಚನದಲ್ಲಿ ಅನ್ಯಜಾತಿಯ ನಿಂದನೆ ಮಾಡಿರುವುದು ಜಾತೀಯತೆ ವಿರುದ್ಧ ಹೋರಾಡಿದ ದಾಸಿಮಯ್ಯನಂತಹವರು ಟೀಕಿಸುವುದು ಸಾಧ್ಯವೇ ಇಲ್ಲ.

150 ರ ವಚನದಲ್ಲಿ ಭಕ್ತನು ಪೂರ್ವಾಶ್ರಮದ ಕೃತಜ್ಞತೆಯಿಂದ ' ಬಂಧುಗಳ ಮನೆಯಲ್ಲಿ ಉಣ್ಣುವುದನ್ನು ಹಂದಿಯ ಬಾಯಿಂದ ನಾಯಿ ತುತ್ತು ಕಿತ್ತು ಕೊಂಡಂತೆ ' ಎಂಬ ವಿಪರೀತ ಹೋಲಿಕೆ ಕೊಟ್ಟಿರುವ ಕಾರಣ ಈ ವಚನಗಳನ್ನು 'ಅಪ್ರಸ್ತುತ' ವೆಂದು ವಿಂಗಡಿಸಿದ್ದಾರೆ.

ಹೀಗೆ ಡಾ || ಎಲ್. ಬಸವರಾಜುರವರು ದೇವರ ದಾಸಿಮಯ್ಯನ ವಚನಗಳು ಕುರಿತು ಕೃತಿ ಹೊರತರಲು ಅವನನ್ನು ಕುರಿತು ಇದೂವರೆಗೂ ಬಂದಿರುವ ತಾಳೆಗರಿ, ಓಲೆಗರಿ, ಗ್ರಂಥ, ಪೂರ್ವದ ಶರಣರ ಅಭಿಪ್ರಾಯ, ಸಮಕಾಲೀನ ಸಂಗತಿಗಳು, ಹಿರಿಯ ವಿದ್ವಾಂಸರು ದಾಸಿಮಯ್ಯನನ್ನು ಕುರಿತು ರಚಿಸಿರುವ ಗ್ರಂಥಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿ, ಅಗತ್ಯ ವಿದ್ದೆಡೆ ಮಾರ್ಪಾಡು ಮಾಡಿ, ತಿದ್ದುಪಡಿ ತಂದು, ಅನಗತ್ಯ ಪದಗಳನ್ನು ಪ್ರಕ್ಷಿಪ್ತ ಸಾಲುಗಳನ್ನು ಗುರುತಿಸಿ ಕೈಬಿಟ್ಟು ಪ್ರಭಾವಿತರ ವಚನಗಳನ್ನು ಅಡಿ ಟಿಪ್ಪಣಿಯಲ್ಲಿ ನೀಡಿ ಅಗತ್ಯವಿದ್ದೆಡೆ ಆ ಕಾಲದ ಬಾಷೆಯ ಅಕ್ಷರವಿಟ್ಟು, ಅಡಿ ಟಿಪ್ಪಣಿ ಕೊಟ್ಟು ಅರ್ಥಪೂರ್ಣವಾಗಿ ಪೀಠಿಕೆಯಲ್ಲಿಯೇ ದಾಸಿಮಯ್ಯನ ಕಾಲ - ಜೀವನ, ವೈಯಕ್ತಿಕ ವಿಚಾರ ಇತ್ಯಾದಿಗಳನ್ನು ಚರ್ಚಿಸಿ ಕೊನೆಯಲ್ಲಿ ಅರ್ಥ ವಿವರಿಸಿ ಅಕಾರಾದಿಯಾಗಿ ಆಧುನಿಕ, ಮಾದರಿ ಪಠ್ಯ ವಿಂಗಡಿಸಿ , ಕಠಿಣ ಪದಗಳಿಗೆ ಅರ್ಥ ನೀಡಿ ಅಂತರ್ ಶಾಸ್ತ್ರೀಯ ಮತ್ತು ಅಂತರ್

ಪತ್ಯ ವಿಮರ್ಶೆಯ ಮೂಲಕ ಸಂಶೋಧನೆಗೆ ವಿಶೇಷ ವ್ಯಾಖ್ಯಾನ ನೀಡಿ ಆ ಮೂಲಕ ಸಾಹಿತ್ಯವಲಯಕ್ಕೆ ಮತ್ತು ಕನ್ನಡ ಸಂಸ್ಕೃತಿಗೆ ವ್ಯಾಖ್ಯಾನ ನೀಡಿ ಕೊಟ್ಟಿರುವ ಕೊಡುಗೆಯನ್ನು ವಸ್ತುನಿಷ್ಠವಾಗಿ ಪರಿಶೀಲಿಸಿ ಸೋದಾಹರಣವಾಗಿ ವಿವರಿಸಲಾಗಿದೆ.

# ಅಧ್ಯಾಯ - 5

## ಷಟ್ಸ್ಥಲಾನುಸಾರಿಯಾದ ವಚನಗಳ ಅಧ್ಯಯನ ಕ್ರಮದ ಹಿನ್ನಲೆಯಲ್ಲಿ ಷಟ್ಸ್ಥಲ ಪೂರ್ವ ವಚನಗಳಾದ ದಾಸಿಮಯ್ಯನ ವಚನಗಳ ವಸ್ತು, ವೈವಿಧ್ಯ ಮತ್ತು ಇವುಗಳ ಪ್ರಸ್ತುತತೆಯ ಅಧ್ಯಯನ.

ವಚನ ಸಾಹಿತ್ಯವನ್ನು ವಿವಿಧ ಸಂಶೋಧಕರು, ವಿದ್ವಾಂಸರು ಮತ್ತು ಆಸಕ್ತರು ಪತ್ತೆಹಚ್ಚಿ, ಸಂಗ್ರಹಿಸಿ, ಸಂರಕ್ಷಿಸಿ ಗ್ರಂಥರೂಪದಲ್ಲಿ ಪ್ರಕಟಿಸಿದ ಮೇಲೆ ಅವುಗಳ ವಸ್ತು ವೈವಿಧ್ಯತೆ ಹಾಗೂ ಸಂವಿಧಾನಕ್ಕನುಗುಣವಾಗಿ ಅವುಗಳ ವಿಭಾಗ ಕ್ರಮಕ್ಕೆ ಮುಂದಾಯಿತು.

ಬಸವಣ್ಣನವರ ವಚನಗಳಿರುವ ತಾಳೋಲೆಗಳಲ್ಲಿಯೇ ಇರುವ ವಚನಗಳನ್ನು ಷಟ್ಸ್ಥಲಾನುಸಾರಿಯಾಗಿಯೇ ರಚಿಸಿರುವುದನ್ನು ಕಾಣಬಹುದು. ಇದನ್ನೇ ಮಾದರಿಯಾಗಿ ಆಯ್ದುಕೊಂಡ ನಂತರದ ಸಂಶೋದಕರು, ಸಂಪಾದಕರು ಕೆಲವು ವಚನಕಾರರ ವಚನಗಳನ್ನು ಷಟ್ಸ್ಥಲಾನುಸಾರಿಯಾಗಿಯೇ ವಿಂಗಡಿಸಿ ಪ್ರಕಟಿಸಿದರು.

[1] ಷಟ್ಸ್ಥಲ ವೆಂಬುದು ವೀರಶೈವರಲ್ಲಿ ಒಂದು ವಿಶಿಷ್ಟ ಪರಿಭಾಷೆ. ಸ್ಥಲ ವೆಂದರೆ ಲಿಂಗ. ಆ ಲಿಂಗವನ್ನೇ ಪರಶಿವ ಬ್ರಹ್ಮ ಎಂದು ಕರೆಯಲಾಗಿದೆ. ಸತ್ ಎಂದರೆ ಇರವು, ಚಿತ್ ಎಂದರೆ ಕ್ರಿಯಾಜ್ಞಾನ ರೂಪದ ಬೆಳಗು ಎಂದರ್ಥ. ಮೂಲದಲ್ಲಿ ಇವೆರಡು ಅವಿನಾಭಾವ ಸಂಬಂಧದಲ್ಲಿರುತ್ತವೆ. ಸೃಷ್ಟಿಕಾರ್ಯಕ್ಕಾಗಿ ಅವೆರಡು ಬೇರಾಗಬಲ್ಲವು. ಜ್ಞಾನಾಂಶವು ಉತ್ತಮ ಕರ್ತೃತ್ವದಿಂದ ಬಿಡುಗಡೆಯಾಗಿ ಸತ್ವಗುಣ ರೂಪದ ಶಕ್ತಿಯಾಗುತ್ತದೆ. ಕ್ರಿಯಾಂಶವು ಉತ್ತಮ ಜ್ಞಾತೃತ್ವ ದಿಂದ ವಿಮುಕ್ತವಾಗಿ ಅಲ್ಪಸತ್ವ ತಮೋಗುಣ ಮಿಶ್ರವಾದ ರಜೋಗುಣ ಶಕ್ತಿಯೆನಿಸುತ್ತದೆ. ಜ್ಞಾನ - ಕ್ರಿಯೆಗಳಲ್ಲಿ ಭೇದ-ಭಾವ ಹುಟ್ಟಸುವುದೇ ತಮೋಗುಣ. ಇದೇ ಮಾಯೆ, ಸತ್ವ, ರಜ, ತಮೋಗುಣಾತ್ಮಕವಾದ ಪ್ರಕೃತಿಯೇ ಸುಖ ದು:ಖಕ್ಕೆ ಮೂಲ ಕಾರಣ. ಪರಮಾತ್ಮನ ಅಂಶವೆನಿಸಿದ ಆತ್ಮವು ಪ್ರಕೃತಿಯಲ್ಲಿ ಸೇರಿಕೊಂಡು ಜೀವಾತ್ಮನೆನಿಸುತ್ತದೆ. ಸುಖ ದು:ಖ ಅನುಭವಿಸುವುದೇ ಮಾನವನ ಅವಸ್ಥೆ. ವೀರಶೈವ ದೀಕ್ಷೆಯಾದರೆ ಜೀವಾತ್ಮವೇ ಶುದ್ದಾತ್ಮ ಎನಿಸಿಕೊಳ್ಳುತ್ತದೆ [1] ಎಂಬುದು ವೀರಶೈವ ಧರ್ಮದ ಪರಿಕಲ್ಪನೆ.

## ಷಟ್ಸ್ಥಲ :

ಸ್ಥಲ ಪದವಾಚಕವಾದ ಪರಬ್ರಹ್ಮವು ಉಪಾಸ್ಯ, ಉಪಾಸನೆ ದೃಷ್ಟಿಯಿಂದ ಲಿಂಗಾಂಗ ವೆಂಬ ದ್ವಿವಿಧಸ್ಥಲವಾಗಿ ಪರಿಣಮಿಸಿದೆ. ಸ್ಥೂಲ, ಸೂಕ್ಷ್ಮ, ಕಾರಣ ಈ ಮೂರು ಶರೀರಗಳಲ್ಲಿ ಲಿಂಗೋಪಾಸನೆ ಸಿದ್ದಿಸಬೇಕೆಂಬ ದೃಷ್ಟಿಯಿಂದ ಇಷ್ಟ, ಪ್ರಾಣ, ಭಾವವೆಂದು ಲಿಂಗಸ್ಥಲವು ಮೂರಾಗಿ ವಿಭಾಗ ಹೊಂದಿದೆ. ಅಲ್ಲದೆ ಉಪಾಸನೆಯು ಹೃದಯ ಮತ್ತು ಪಂಚ ಬಹಿರಿಂದ್ರಿಯಗಳ ಮುಖದಿಂದಲೂ ನಡೆಯುವ ರೀತಿಯಲ್ಲಿ ಇಷ್ಟಾದಿ ಮೂರು ಲಿಂಗಸ್ಥಲಗಳು ಆಚಾರಾದಿಯಾಗಿ ಆರು ಲಿಂಗಸ್ಥಲಗಳಾಗಿಯೂ ತ್ಯಾಗಾದಿಯಾಗಿ ಮೂರು ಅಂಗಸ್ಥಲಗಳು ಆರು ಅಂಗಸ್ಥಲಗಳೊಡನೆ ಪೂಜ್ಯ ಪೂಜಕ ಭಾವದಲ್ಲಿ ಒಂದಾಗುತ್ತಾ ನಡೆದು ಕೊನೆಗೆ ಪೂಜ್ಯವೇ ಪೂಜಕನೆಂಬ ಭಾವದಲ್ಲಿ ಎರಡಿಲ್ಲದಂತೆ ಒಂದಾಗುತ್ತದೆ. ಅದೇ ಲಿಂಗಾಂಗ ಸಾಮರಸ್ಯ ಅರ್ಥಾತ್ ಷಟ್ ಸ್ಥಲ ಶಾಸ್ತ್ರ. ಇದರ ಬಗ್ಗೆ ಬಸವಣ್ಣನವರ ಈ ವಚನ ನೋಡೋಣ.

"ಮೆಲ್ಲ ಮೆಲ್ಲನೆ ಭಕ್ತನಪ್ಪೆ, ಮೆಲ್ಲ ಮೆಲ್ಲನೆ ಮಹೇಶ್ವರನಪ್ಪೆ;
ಮೆಲ್ಲ ಮೆಲ್ಲನೆ ಪ್ರಸಾದಿಯಪ್ಪೆ, ಮೆಲ್ಲ ಮೆಲ್ಲನೆ ಪ್ರಾಣ ಲಿಂಗಿನಪ್ಪೆ;
ಮೆಲ್ಲ ಮೆಲ್ಲನೆ ಶರಣನಪ್ಪೆ, ಮೆಲ್ಲ ಮೆಲ್ಲನೆ ಐಕ್ಯನಪ್ಪೆ."

ಇದೆ ಮಾತನ್ನು ಜ್ಞಾನ ನಿಧಿಯಾದ ಚನ್ನ ಬಸವಣ್ಣನವರು ಖಂಡಿಸಿ ಹೇಳುವ ವಚನ ಹೀಗಿದೆ :

ಮೆಲ್ಲ ಮೆಲ್ಲನೆ ಭಕ್ತ, ಮೆಲ್ಲ ಮೆಲ್ಲನೆ ಮಾಹೇಶ್ವರ ;
ಮೆಲ್ಲ ಮೆಲ್ಲನೆ ಪ್ರಸಾದಿ, ಮೆಲ್ಲ ಮೆಲ್ಲನೆ ಪ್ರಾಣಲಿಂಗಿ ;
ಮೆಲ್ಲ ಮೆಲ್ಲನೆ ಶರಣ , ಮೆಲ್ಲ ಮೆಲ್ಲನೆ ಐಕ್ಯರಾದೆವು
ಎಂಬರು ನಿಮ್ಮ ಶರಣರು.

ಪ್ರಸ್ತುತ ನಾವು ಅಧ್ಯಯನ ಮಾಡುತ್ತಿರುವ ಆದ್ಯ ವಚನಕಾರ ದಾಸಿಮಯ್ಯನವರು ಸಹ ತಮ್ಮದೊಂದು ವಚನದಲ್ಲಿ ಈ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಅನುಭಾವ ವಿಲ್ಲದವನ ಭಕ್ತಿ ತಲೆ ಕೆಳಗಹುದಯ್ಯ.
ಅನುಭಾವವೇ ಭಕ್ತಿಗಾಧಾರ, ಅನುಭಾವವೇ ಭಕ್ತಿಗೆ ನೆಲೆ
ಅನುಭಾವ ಉಳ್ಳವರ ಕಂಡಾಗ ತೂರ್ಯ ಸಂಭಾಷಣೆಯ
ಬೆಸಗೊಳ್ಳದಿರ್ದಡೆ ನರಕದಲ್ಲಿಕ್ಕಯ್ಯಾ ರಾಮನಾಥ.

ಆದ್ದರಿಂದ ಶಿವಾನುಭವದಲ್ಲಿ ಐಕ್ಯನಾದವನೇ ಲಿಂಗೈಕ್ಯ. ಅದೇ ಶಿವಾನುಭವ. ಬಸವಣ್ಣನವರ ಷಟ್‌ಸ್ಥಲದ ವಚನಗಳು ಈ ಕೆಳಕಂಡಂತಿವೆ.

1. ಭಕ್ತಸ್ಥಲ
2. ಮಾಹೇಶ್ವರ ಸ್ಥಲ
3. ಪ್ರಸಾದಿ ಸ್ಥಲ
4. ಪ್ರಾಣಲಿಂಗಿ ಸ್ಥಲ
5. ಶರಣ ಸ್ಥಲ
6. ಐಕ್ಯ ಸ್ಥಲ.

ಬಸವಣ್ಣ , ಚೆನ್ನಬಸವಣ್ಣ ಮತ್ತಿತರ ಕೆಲವು ವಚನಕಾರರ ವಚನಗಳನ್ನು ಷಟ್ಸ್ಥಲಾನುಸಾರಿಯಾಗಿ ವಿಂಗಡಿಸಿ ಪ್ರಕಟಿಸುವ ಕೆಲಸವನ್ನು ವೀರಶೈವ ಮಠಗಳು, ಸಂಶೋಧಕರು, ಸಂಘ - ಸಂಸ್ಥೆಗಳು ಆಗಾಗ ಮಾಡುತ್ತಲೇ ಬಂದಿವೆ.

ಆದರೆ ವಚನ ಸಾಹಿತ್ಯದ ಪಿತಾಮಹನಾದ ದಾಸಿಮಯ್ಯ ಮತ್ತು ಬೆಡಗಿನ ವಚನಗಳ ಹರಿಕಾರ ಅಲ್ಲಮಪ್ರಭುವಿನ ವಚನಗಳನ್ನು ಷಟ್ಸ್ಥಲಾನುಸಾರಿಯಾಗಿ ವಿಭಜಿಸಿ ಪ್ರಕಟಿಸಲು ಇದೂವರೆಗೂ ಸಾಧ್ಯವಾಗಿಲ್ಲ. ಏಕೆಂದರೆ ಸರಳ ವಿಭಾಗ ಕ್ರಮಗಳಿಗೆ ದಾಸಿಮಯ್ಯ ಮತ್ತು ಅಲ್ಲಮ ಪ್ರಭುವಿನ ವಚನಗಳ ಅಂಶಗಳು ಒಳಪಟ್ಟಿಲ್ಲ.

ಆದ್ದರಿಂದ ಷಟ್ಸ್ಥಲಾನುಸಾರಿಯಾಗಿ ವಚನಗಳನ್ನು ಅಧ್ಯಯನ ಮಾಡುವ ಹಿನ್ನಲೆಯಲ್ಲಿ ಷಟ್ಸ್ಥಲ ಪೂರ್ವ ವಚನಗಳಾದ ದಾಸಿಮಯ್ಯನವರ ವಚನಗಳ ವಸ್ತು, ವೈವಿಧ್ಯತೆ ಹಾಗೂ ಇವುಗಳನ್ನು ಪ್ರಸ್ತುತ ಏಕೆ ಅಧ್ಯಯನ ಮಾಡಬೇಕು ಇವುಗಳು ಪ್ರತಿಪಾದನೆ ಮಾಡವ ವಿಚಾರಗಳು ಚರಿತ್ರೆಯ ಘಟನೆ ಮಾತ್ರವಾಗಿ, ಅಂದಿನ ಜನ-ಜೀವನ ಪರಿಚಯಿಸುವ ದಾಖಲೆಗಳಾಗಿ ಇಲ್ಲವೆ ಕಾವ್ಯವಾಗಿ ಮಾತ್ರ ಉಳಿದಿದೆಯೇ? ಎಂಬುದನ್ನು ಪರಿಶೀಲಿಸಬೇಕಾಗಿದೆ.

ಇಲ್ಲ, ದಾಸಿಮಯ್ಯನ ವಚನಗಳು ಅಪ್ರಸ್ತುತವಾಗಿದ್ದರೆ ಇಂದು ಸಂಶೋಧಕರು, ವಿದ್ವಾಂಸರು, ವಿದ್ಯಾರ್ಥಿಗಳು, ಆಸಕ್ತರು ದಾಸಿಮಯ್ಯನ ವಚನಗಳ ಬಗ್ಗೆ ಚಿಂತಿಸುತ್ತಿರಲಿಲ್ಲ. ವಚನಗಳು ಮೌಲ್ಯಯುತವಾಗಿದ್ದು ಕಾವ್ಯಗುಣ, ಆತ್ಮಾವಲೋಕನ, ಮೌಢ್ಯ ಖಂಡನೆ, ಚಂದದ ಉಪಮೆ ಇತ್ಯಾದಿ ಸಾರ್ವಕಾಲಿಕ ಸತ್ವದಿಂದಾಗಿಯೇ ಇಂದಿಗೂ, ಎಂದಿಂದಿಗೂ ಹೇಗೆ ಪ್ರಸ್ತುತವಾಗಿವೆ ಎಂಬುದನ್ನು ಪರಿಶೀಲಿಸೋಣ.

## ಭಕ್ತ ಸ್ಥಲ :-

ಭಕ್ತನು ದೀಕ್ಷೆ ನೀಡುವ ಸಂದರ್ಭದಲ್ಲಿ ಗುರು ಕೊಟ್ಟ ಇಷ್ಟಲಿಂಗವನ್ನು ಬಿಟ್ಟು ಸ್ಥಾವರಲಿಂಗಗಳಿಗೆ ಎರಗಬಾರದು. ಏಕೆಂದರೆ ಇಷ್ಟಲಿಂಗವೇ ಪರದೈವ ಬ್ರಹ್ಮರಂಧ್ರದ ಚಿತ್ಕಳೆಯನ್ನು ಗುರು ಆಕರ್ಷಿಸಿ ಆತ್ಮಕ್ಕೆ ಭಾವಲಿಂಗವನ್ನಾಗಿ ಮನಸ್ಸಿಗೆ ಪ್ರಾಣಲಿಂಗವನ್ನಾಗಿ, ದೇಹಕ್ಕೆ ಇಷ್ಟಲಿಂಗವನ್ನಾಗಿ ಮಾಡಿಕೊಟ್ಟಿರುವಾಗ ಬೇರೆ ಸ್ಥಾವರಲಿಂಗದ ಹಂಗೇಕೆ ? ಇಷ್ಟಲಿಂಗವನ್ನು ಯಾವಾಗಲೂ ಅಗಲುವಂತಿಲ್ಲ. ಇಷ್ಟಲಿಂಗ ಪೂಜೆಯನ್ನು ಶಾಸ್ತ್ರೋಕ್ತವಾಗಿ ಮಾಡುತ್ತಿರಬೇಕು. ಬೆಳಿಗ್ಗೆ ಏಳುತ್ತಲೇ ಇಷ್ಟಲಿಂಗವನ್ನು ದರ್ಶನ ಮಾಡಬೇಕು.

ಮಣಿ ಗಣ ಸೂತ್ರದಂತೆ ತ್ರಿಣಯನ ನೀನಿಪ್ಪೆಯಯ್ಯೆ
ಎಣಿಸುವಡೆ ತನುಭಿನ್ನ: ಆತ್ಮನೊಬ್ಬನೆ !
ಅಣು ರೇಣು ಮಧ್ಯದಲಿ ಗುಣಭರಿತ ನೀನೆಂದು
ಮಣಿವುತಿದ್ದೆನಯ್ಯಾ ರಾಮನಾಥ.

ಒಟ್ಟಾಗಿ ಪೋಣಿಸದ ಮಣಿಗಳು ಬಿಡಿ ಬಿಡಿಯಾಗಿ ಕಂಡರೂ ದಾರದಲ್ಲಿ ಜೋಡಿಸಿದಾಗ ಸುಂದರವಾದ ಹಾರ ವಾಗುವಂತೆ , ಚರಾ- ಚರ ವಸ್ತುಗಳು ಬೇರೆ ಬೇರೆಯಾಗಿ ಕಂಡರೂ ಅವುಗಳೆಲ್ಲದರಲ್ಲೂ ಭಗವಂತನು ಅಂತರ್ಗತವಾಗಿರುವುದು ಮನೋಹರವಾಗಿದೆ.

ಹಸ್ತಾಬ್ಜ ಮಥನದಿಂದೊತ್ತಿ ಭಸ್ಮಬ ಮಾಡಿ
ಮತ್ತೆ ಪಂಚಾಕ್ಷರಿಯ ಮರುಜವಣಿಯ
ಚಿತ್ತ ಶ್ರೋತ್ರದೊಳು ಧಾರೆಯ ನೆರೆಯಲು
ಆತ ನಿನ್ನಂತೆ ಕಾಣಾ ರಾಮನಾಥ.

ಓಂ ನಮ: ಶಿವಾಯ ಎಂಬುದು ಪಂಚಾಕ್ಷರಿ ಮಂತ್ರವಷ್ಟೇ ಅಲ್ಲ ಅದು ಸಂಜೀವಿನಿ. ಅದನ್ನು ಮನ: ಪೂರ್ವಕವಾಗಿ ಧ್ಯಾನಿಸಿ, ಪರರಿಗೆ ಹೇಳುವುದರಿಂದ ಸ್ವಕಾರ್ಯವೂ , ಸ್ವಾಮಿಕಾರ್ಯವು ಏಕಕಾಲಕ್ಕೆ ಆಗಿ ಆತ್ಮೋದ್ಧಾರ ಉಂಟಾಗುತ್ತದೆ.

ಗುರು - ಲಿಂಗ ಒಂದೆಂಬರು
ಗುರು - ಲಿಂಗ ಒಂದಾದ ಠಾವ ತಿಳಿದು ನೋಡಿರೇ
ಗುರು ಕಾರುಣ್ಯವಾದ ಬಳಿಕ
ಅಂಗದ ಮೇಲೆ ಲಿಂಗ ವಿರಬೇಕು
ಲಿಂಗವಲ್ಲದ ಗುರು ಕಾರುಣ್ಯವು
ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ ಕಾಣಾ ರಾಮನಾಥ.

ಗುರು ಮತ್ತು ಲಿಂಗದಲ್ಲಿ ವ್ಯತ್ಯಾಸವಿಲ್ಲ. ಭಕ್ತನಾದವನು ಅಂಗದ ಮೇಲೆ ಧರಿಸಿದ ಲಿಂಗ ಸ್ಥಿರವಾದರೆ ಜಂಗಮ ಸಂಚಾರಿ ಲಿಂಗ. ಆದರೆ ಇದಕ್ಕೆ ಗುರುವಿನ ಅನುಗ್ರಹ ಬೇಕು. ಇಲ್ಲದಿದ್ದರೆ ನೀರಿಲ್ಲದ ಕೆರೆಯಲ್ಲಿ ತಾವರೆ ಹೇಗೆ ಇರುವುದಿಲ್ಲವೋ ಗುರುವಿಲ್ಲದ ಭಕ್ತ ಗುರಿ (ಮುಕ್ತಿ) ತಲುಪಲಾರ ಎಂಬುದು ಧಾರ್ಮಿಕ ನಿಯಮ. ಕಾಯಕ ಮಹತ್ವ ಸಾರಿದ ದಾಸಿಮಯ್ಯನ ನಂಬಿಕೆಗೆ ವಿರುದ್ಧ ಈ ವಚನ.

ಪ್ರಾಣವ ಕಳೆ ಪ್ರಕೃತಿಯಲ್ಲಡಗಿ
ಪ್ರಕೃತಿಯ ಕಳೆ ಪ್ರಾಣನಲ್ಲಡಗಿ
ಪ್ರಾಣನ ಕಳೆಯ, ಪ್ರಕೃತಿಯ ಕಳೆಯ
ಲಿಂಗವೆಂದರಿದು ಅಂಗೈಸಿ ಅನುಭವಿಸಿ ಬಲ್ಲವರ
ಲೆಂಗಿ ನಾನಾಗಿಪ್ಪೆನಯ್ಯ ರಾಮನಾಥ.

ಹುಟ್ಟಿದ ಮನುಷ್ಯ ಸಾಯಲೇಬೇಕು. ಅದು ಪ್ರಕೃತಿಯ ನಿಯಮ ಮತ್ತು ವೈಶಿಷ್ಟ್ಯ. ಸಕಲ ಜೀವಿಗಳಿಗೂ ಪ್ರಾಣ ನೀಡಿರುವುದು ಮತ್ತು ಅದನ್ನು ತೆಗೆದುಕೊಳ್ಳುವುದರಿಂದ ಪ್ರಕೃತಿ ತನ್ನ ವಿಸ್ಮಯವನ್ನು ಉಳಿಸಿಕೊಂಡಿದೆ. ಹೀಗಿರುವಾಗ 'ಲಿಂಗ'ವನ್ನು ಅರಿತು, ಅನುಭವಿಸಿದವರ ನಂಬಿ ಬಾಳುತ್ತಿದ್ದೇನೆ ಎಂಬುದು ದಾಸಿಮಯ್ಯನ ವಾದ.

ಎನ್ನೊಡಲಾದರೆ ಎನ್ನಿಚ್ಚೆಯೊಳಿಹುದೆ
ನಿನ್ನೊಡಲಾದರೆ ನಿನ್ನಿಚ್ಚೆಯೊಳಿಹುದು
ಅದು ಎನ್ನೊಡಲೂ ಅಲ್ಲ, ನಿನ್ನೊಡಲೂ ಅಲ್ಲ.
ನೀ ಮಾಡಿದ ಜಗದ ಬಿನ್ನಾಣಧೊಡಲು ಕಾಣಾ ರಾಮನಾಥ.

ಪಂಪಭೂತಗಳಿಂದ ನಿರ್ಮಾಣಗೊಂಡಿದ್ದು ಈ ಶರೀರ. ನಮ್ಮ ಮನಸ್ಸು ಒಂದು ರೀತಿಯಲ್ಲಿ ಯೋಚಿಸಿದರೆ ದೇಹ ಮತ್ತೊಂದ ಬಯಸುವುದು. ಈ ಶರೀರ ನನ್ನದಾದರೆ ನಾನು ಹೇಳಿದಂತೆ ಕೇಳಬೇಕು. ದೈವ ನಿರ್ಮಿತವಾಗಿದ್ದರೆ ಭಗವಂತನ ಅಪೇಕ್ಷೆಯಂತೆ ನಡೆಯಬೇಕು. ಇತ್ತ ತನ್ನ ಅಂಕೆಯಲ್ಲೂ ಇಲ್ಲದ, ಅತ್ತ ದೈವ ಸಾನ್ನಿಧ್ಯಕ್ಕೂ ಸೇರದ ಈ ಶರೀರ ಸೃಷ್ಟಿಯ ಲೀಲೆಗಳಲ್ಲೊಂದು ಎಂಬ ಅಸಹಾಯ ಕತೆಯನ್ನು ದಾಸಿಮಯ್ಯನು ತೋಡಿಕೊಂಡಿದ್ದಾನೆ:

ಗುರು ಕರುಣಿಸಲು ಸಂಸಾರ ವಿಷಯ ಕೆಟ್ಟಿತ್ತು,
ಮಾಯಾ ಪ್ರಪಂಚು ಬಿಟ್ಟಿತ್ತು: ಹುಟ್ಟರತು ಹೋಯಿತ್ತು
ನೆಟ್ಟಗೆ ಗುರುಪಾದವ ಮುಟ್ಟಿ ಭವಗೆಟ್ಟೆನು ಕಾಣಾ ರಾಮನಾಥ.

'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ!' – ಎಂದು ಅನುಭಾವಿಗಳು ಹೇಳಿರುವಂತೆ ಗುರು ಸಾನ್ನಿಧ್ಯವಿಲ್ಲದೆ ಏನೂ ಆಗುವುದಿಲ್ಲ. ಅಂತಹ ಗುರುವಿನ ಮಾರ್ಗದರ್ಶನದಿಂದ ಕಾಮಾದಿ ಬಯಕೆ ಕಮ್ಮಿಯಾಗುತ್ತದೆ; ಮಾಯೆ ಮರೆಯಾಗುತ್ತದೆ; ಜನ್ಮಾಂತರದ ಕೋಟಲೆ ದೂರಾಗುತ್ತದೆ. ಕಡೆಗೆ ಗುರುಪಾದ ಸೇವೆಯಿಂದ ಭವ ನಾಶವಾಗಿ ಮುಕ್ತಿ ಸಿಗುತ್ತದೆ. ಇದೆಲ್ಲಕ್ಕೂ ಗುರು ಕರುಣೆ ಬೇಕು. ವಚನ ಗುರುವಿನಿಂದ ಎಂತಹ ವಿನೀತಭಾವ, ಸಜ್ಜನಿಕೆ, ತಾನೂ ಕಿರಿಯನೆಂಬ ಭಾವ!

ಹೀಗೆ ಕಾಡಸಿದ್ದೇಶ್ವರರು ಹೇಳಿರುವಂತೆ ಭಕ್ತನಾದವನು ಬಾಳೆಯ ಹಣ್ಣಿನಂತಿರಬೇಕು. ಬೆಲ್ಲದ ಕುಳ್ಳಿಯಂತಿರಬೇಕು. ಮಾವಿನ ಫಲದಂತಿರಬೇಕು . ಇಂತಹವನು ಮಾತ್ರ ಸದ್ಭಕ್ತ ಎನಿಸಿಕೊಳ್ಳುತ್ತಾನೆ. ಹೀಗೆ ಭಕ್ತ ಸ್ಥಲದಲ್ಲಿ ಸದ್ಭಕ್ತಿಯನ್ನು ಬೆಳೆಸಿಕೊಳ್ಳುತ್ತಾ ಕ್ರಿಯಾಶಕ್ತಿಯುತವಾದ ಆಚಾರ ಲಿಂಗದ ಉಪಾಸನೆಯನ್ನು ಭಕ್ತನು ಮಾಡುತ್ತಾನೆ.

(II) ಮಹೇಶ್ವರ ಸ್ಥಲ:

ಹರ ತನ್ನ ಭಕ್ತರ ತಿರಿವಂತೆ ಮಾಡುವ
ಒರೆದು ನೋಡುವ ಸುವರ್ಣದ ಚಿನ್ನದಂತೆ
ಅರೆದು ನೋಡುವ ಚಂದನದಂತೆ
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥ.

ದೇವರು ಸುಲಭ ಲಭ್ಯನಲ್ಲ. ಆತನು ತನ್ನ ಭಕ್ತರ ಭಕ್ತಿ ಎಂತಹುದೆಂಬುದನ್ನು ಪರೀಕ್ಷಿಸಿ ನೋಡುತ್ತಾನೆ. ಇಂತಹ ಸಂದರ್ಭದಲ್ಲಿ ಭಕ್ತನು 'ಬಂದದ್ದೆಲ್ಲಾ ಬರಲಿ ಭಗವಂತನ ದಯೆಯೊಂದಿರಲಿ' ಎಂಬಂತೆ ದೃಢ ಮನಸ್ಸಿದ್ದರೆ ಅಂತಹ ಭಕ್ತನನ್ನು ಭಗವಂತ ಕೈಬಿಡುವುದಿಲ್ಲ. ಚಿನ್ನವನ್ನು ಉಜ್ಜಿದಾಗಲೇ, ಗಂಧವನ್ನು ಕತ್ತರಿಸಿದಾಗಲೇ, ಕಬ್ಬಿನ ರಸ ಹಿಂಡಿದಾಗಲೇ ಅವುಗಳ ಮಹತ್ವ ತಿಳಿಯುತ್ತದೆ. ಸರಳ ಉಪಮೆ ದಾಸಿಮಯ್ಯನದು.

ಪರ ವಧುವ ನೆರೆಯದೆ, ಪರಧನವ ತುಡುಕದೆ
ಪರದೈವ ದಿಚ್ಚೆವಡೆಯದೆ
ಗುರು-ಲಿಂಗ-ಜಂಗಮಕ್ಕೆ ವರದಾಸನಾದಾತನೇ
ಧರೆ ಮೂಱಕ್ಕೆ ಗುರುವಾಗಿಪ್ಪನೈ ರಾಮನಾಥ

ಭಕ್ತನ ಮನಸ್ಸು ಲಿಂಗಕ್ಕೆ ಮೀಸಲಾಗಿರಬೇಕು. ಆತನ ಕಣ್ಣು, ಮನಸ್ಸು, ಕೈಗಳು ಹೆಣ್ಣು-ಹೊನ್ನು-ಮಣ್ಣುಗಳ ಸಂಗಕ್ಕಾಗಿ ಹಾತೊರೆಯುತ್ತವಾದರೂ ಅವುಗಳಿಂದ ದೂರವಿರಬೇಕು. ಈ ಆಸೆಯನ್ನು ನಿಗ್ರಹಿಸಿ ಗುರುಪೂಜೆಯಲ್ಲಿ, ಲಿಂಗಪ್ರೇಮದಲ್ಲಿ, ಜಂಗಮ ದಾಸೋಹದಲ್ಲಿ ತೊಡಗಿಸಿಕೊಳ್ಳಬೇಕು. ಇಂತಹವನು ಬರಿ ಭಕ್ತನಾಗಿರದೆ ಮೂರು ಲೋಕಕ್ಕೂ ಮಾದರಿಯಾಗಿ, ಗುರುವಾಗಿ ಇರುತ್ತಾನೆ. ನಿಜ, ಇಂದು ಜಗತ್ತಿನಲ್ಲಿ ನಡೆಯುತ್ತಿರುವ ಅನಾಹುತಗಳಿಗೆಲ್ಲ ಮುಖ್ಯ ಕಾರಣ ಹೆಣ್ಣು- ಹೊನ್ನು-ಮಣ್ಣು. ಪರದೈವವನ್ನು ಸಹ ಕಂಡವರ ಆಸ್ತಿ ಎಂದು ಭಾವಿಸ ಬೇಕು ಎಂದಿರುವುದು ದಾಸಿಮಯ್ಯನ ನಿಷ್ಠೆಗೆ ಸಾಕ್ಷಿ. ಆಮಿಷಗಳು ಸಾರ್ವಕಾಲಿಕ.

ಒಂದಾಗಿಹ [ನೈ] ದು ಭೂತ, ಚಂದ್ರ-ಸೂರ್ಯರು
ನಂದಿವಾಹನ, ನಿಮ್ಮ ತನುವಲ್ಲವೆ?
ನಿಂದು ನೋಡಲು ಜಗ ಭರಿತನಾಗಿಪ್ಪೆ-ಇನ್ನು
ನಿಂದಿಸುವೆ ನಾರನೈ ರಾಮನಾಥ?

ಪಂಚಭೂತಗಳಾದ ಭೂಮಿ-ನೀರು-ಬೆಂಕಿ-ವಾಯು-ಆಕಾಶ ಮತ್ತು ಸೂರ್ಯ-ಚಂದ್ರ ಸಕಲ ಜೀವವ್ಯೂಹದಲ್ಲೂ ಶಿವನ ದೇಹವಿದೆ. ಆದ್ದರಿಂದಲೇ ಶಿವನನ್ನು 'ಸರ್ವೇಶ್ವರ' ಎಲ್ಲಾ ಕಡೆಯು ಇರುವವನು ಎನ್ನುವುದು. ಸರ್ವದಲ್ಲೂ ಸಾದರವಿದ್ದೂ ಪ್ರತ್ಯಕ್ಷನಾಗದ ಶಿವನನ್ನು ಒಲಿಸಿಕೊಳ್ಳುವುದೇಗೇಂಬ ಚಿಂತೆಯಿಂದ ಯಾರನ್ನು ದೂಷಿಸಲಿ, ಎಂದು ಪ್ರಶ್ನಿಸಿ ಅರಿವ ಅರಿವಿರಬೇಕು ಎಂಬುದು ತಾತ್ಪರ್ಯ.

[ಬರುಸಟೆಗನ] ಭಕ್ತಿ ದಿಟವೆಂದು ನಚ್ಚಲು ಬೇಡ:
ಮಠದೊಳಗಣ ಬೆಕ್ಕು ಇಲಿಯ ಕಂಡು
ಪುಟನೆಗೆದಂತಾಯಿತ್ತು ಕಾಣಾ ರಾಮನಾಥ

'ಹರನೆಂಬುದೆ ಸತ್ಯ; ಸತ್ಯವೆಂಬುದು ಹರ'- ಎಂಬ ಅಭೇದ ಕಲ್ಪನೆ ಇರಬೇಕು ಭಕ್ತನಿಗೆ. ಅದು ಬಿಟ್ಟು ಹೆಚ್ಚು ಸುಳ್ಳಾಡುವವನ, ಸಮಯಕ್ಕೆ ತಕ್ಕಂತೆ ಬದಲಾಗುವವನ ಮಾತನ್ನಾಗಲಿ, ಭಕ್ತಿಯನ್ನಾಗಲಿ ನಿಜವೆಂದು ನಂಬಬಾರದು. 'ಅಭಾವ ವೈರಾಗ್ಯ'ದಿಂದ ಸನ್ಯಾಸಿಯಂತಿದ್ದು ಮಠದೊಳಗಿರುವ ಬೆಕ್ಕು ಇಲಿಯನ್ನು ಕಾಣುತ್ತಿದ್ದಂತೆ ಅದನ್ನು ಹಿಡಿದು ತಿನ್ನಲು ಯತ್ನಿಸುವಂತೆ ಇಂತಹ ಭಕ್ತರು ಎಲ್ಲಿ, ಯಾವಾಗ ,ಯಾವುದಕ್ಕೆ ದಾಸರಾಗುತ್ತಾರೆಂದು ಹೇಳಲು ಬರುವುದಿಲ್ಲ.

ಶರಧಿಯ ಮೇಲೆ ತಿರಿಯ ಕರಗದಂತಿರಿಸಿದೆ!
ಅಂಬರಕ್ಕೆ ಗಡಿಗೆ ಬೋದಿಗೆ ಇಲ್ಲದಂತಿರಿಸಿದೆ!
ಎಲೈ ಮೃಡನೆ ನೀನಲ್ಲದುಳಿದ ದೈವಂಗಳಿಗೆ
ಅಹುದೆ ರಾಮನಾಥ?

ವಿಶ್ವ ಸೃಷ್ಟಿಯಲ್ಲಿ ಭೂಮಿಯ ಮೇಲೆ ನೆಲವು ಶೇ.29 ಭಾಗದಷ್ಟಿದ್ದು ಶೇ.71 ಭಾಗ ನೀರಿನಿಂದ ಆವೃತ್ತವಾಗಿದೆ. ಆದರೂ ನೀರಿನ ಸಂಗಮದಿಂದ ನೆಲ ಕರಗಬೇಕು. ಆದರೆ ಕರಗಿ ನೀರಿನಲ್ಲಿ ಲೀನವಾಗುತ್ತಿಲ್ಲ! ಏಕೆ? ಆಕಾಶವೂ ಹಾಗೆಯೆ ಕೊನೆಯೂ ಇಲ್ಲ, ಎಲ್ಲೆಯೂ ಇಲ್ಲ! ಅಗಲವಾದದ್ದು ಹರಿಯ ಬೇಕು. ಉದ್ದವಾದದ್ದು ಮುರಿಯಬೇಕು, ಹೆಚ್ಚಿದ್ದು ಇಳಿಯಬೇಕು . ಆದರೆ ಶಿವ ಸೃಷ್ಟಿಯ ಭೂಮಿ, ಆಕಾಶಕ್ಕೆ ಈ ನಿಯಮ ಅನ್ವಯಿಸದೆ ಚಿರಸ್ಥಾಯಿಯಾಗಿಯೇ ಉಳಿದಿದೆ. ಹೌದು 'ಮಾನವ ಕೊಟ್ಟದು ಮನೆತನಕ, ದೇವರು ಕೊಟ್ಟಿದ್ದು ಕೊನೆತನಕ'ಎನ್ನುವುದು ಇದಕ್ಕೆ ಇರಬೇಕು!

ಆಶ್ಚರ್ಯವೆಂದರೆ ಭೂಮಿಯ ಮೇಲೆ ಮುಕ್ಕಾಲುಭಾಗ ನೀರು, ಕಾಲುಭಾಗ ಮಾತ್ರ ನೆಲ ಎಂಬ ಸತ್ಯ ಇತ್ತೀಚಿನ ಸಂಶೋಧನೆಯ ಫಲ. ಆದರೆ ಅದನ್ನು ದಾಸಿಮಯ್ಯ ಎಂಟುನೂರು ವರ್ಷಗಳ ಹಿಂದೆ ಹೇಗೆ ತಿಳಿದಿದ್ದನು? ಅಚ್ಚರಿ !

ಹಂದಿ ಶ್ರೀಗಂಧದ ಪೂಸಿದಡೇನು ಗಂಧರಾಜನಾಗಬಲ್ಲುದೇ ?
ನವಿಲು ನಲಿಯಿತ್ತೆಂದಡೆ ಕಾಕೋಳಿ ಪುಚ್ಚವ ತಱಕೊಂಡಂತೆ
ಕರ್ಮಿಗಳ ಭಕ್ತಿ!
ಹೊರವೇಷದ ವಿಭೂತಿ ರುದ್ರಾಕ್ಷಿಯ ಪೂಸಿದಡೇನು ?!
ತೆಱನನಳಿದು, ಮಱವೆಯ ಕಳೆದು
ಮಾತಿನಂತೆ ನೀತಿಯುಳ್ಳಡೆ
ಅವರನಜಾತರೆಂಬೆ ಕಾಣಾ ರಾಮನಾಥ.

ಹೇಸಿಗೆ ತಿಂದು ಬದುಕುವ ಹಂದಿಗೆ ಕೊಳಕು ವಾತಾವರಣವೇ ಅದಕ್ಕಿಷ್ಟ. ಅದರ ಮಲೀನತೆ ತೊಲಗಿಸಲು ಪರಿಮಳ ದ್ರವ್ಯವನ್ನು ಲೇಪಿಸಿದರೂ ಅದರ ದುರ್ಗಂಧ ದೂರಾಗುವುದಿಲ್ಲ. ನವಿಲು ತನ್ನ ಚಂದದ ಗರಿಗಳನ್ನು ಬಿಚ್ಚಿ ನರ್ತಿಸುವುದನ್ನು ಕಂಡ ಕಾಡುಕೋಳಿ ಸಂಕಟದಿಂದ ತನ್ನ ಪುಕ್ಕ ಕಿತ್ತುಕೊಂಡರೆ ಸುಂದರವಾದ, ನವಿಲಿನಂತಹ ಗರಿಗಳು ಅದಕ್ಕೆ ಮೂಡುವುದಿಲ್ಲ. - ಹೀಗೆ ದುಷ್ಟರ ಮೂಲಭೂತ ಗುಣ ಬದಲಾಗುವುದಿಲ್ಲ. ಹಾಗೆಯೇ ತೋರ್ಪಡಿಕೆಯ ಭಕ್ತಿಯಿಂದ ವಿಭೂತಿ, ರುದ್ರಾಕ್ಷಿ ದಂಡ, ಅಪಖ್ಯಾತಿ. ಇದನ್ನರಿತು ನೇಮ ನಿಷ್ಟೆ ಇದ್ದವರು ಮಾತ್ರ ಭಕ್ತರಾಗಬೇಕು. ಅಂತಹವರು ಮಾತ್ರ ಮೋಕ್ಷವನ್ನು ಹೊಂದುತ್ತಾರೆ ಎಂಬುದು ನೀತಿ. ಆಷಾಡಭೂತಿಗಳಿಗೆ ಎಚ್ಚರಿಕೆಯ ಮಾತು, ಬೂಟಾಟಿಕೆಯ ಭಕ್ತಿಯನ್ನು ದಾಸಿಮಯ್ಯ ಒಪ್ಪುವುದಿಲ್ಲ.

## (III) ಪ್ರಸಾದಿ ಸ್ಥಲ :

ಅಂತರಂಗ ಶಾಂತಿಯುತವಾಗಿ ಜ್ಞಾನೋದಯವಾಗುವುದರಿಂದ ಎಲ್ಲ ಕಡೆಯೂ ಶಿವನನ್ನು ಕಾಣುವ ಸ್ವಭಾವ. ಎಲ್ಲವನ್ನೂ ಶಿವನ ಕಾರ್ಯಗಳನ್ನಾಗಿ ತಿಳಿಯುವ ಬುದ್ಧಿ, ತಾನು ಶಿವನ ಪೋಷಣೆಗೆ ಒಳಗಾಗಿ ಶಿವನ ಮೂಲಕ ಎಲ್ಲವನ್ನೂ ಪ್ರಸಾದ ರೂಪವಾಗಿ ಪಡೆಯುತ್ತಿರುವೆನೆಂಬ ಅರಿವು ಈ ಪ್ರಸಾದಿ ಸ್ಥಲದಲ್ಲಿ ದೊರೆಯುತ್ತದೆ.

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಸೂಸುವ ವಾಯು ನಿಮ್ಮ ದಾನ! ನಿಮ್ಮ
ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳ ನೇನೆಂಬೆ ಹೇಳ ರಾಮನಾಥ.

ಇಡೀ ಜಗತ್ತು ಭಗವಂತನ ಸೃಷ್ಟಿ, ಪಂಚಭೂತಗಳು, ಗ್ರಹ-ತಾರೆಗಳು ಅವನ ಕೊಡುಗೆ. ಹೀಗಿರುವಾಗ ಯಾರೋ ಹಾಕಿದ ಬೋನವನ್ನುಂಡು ತೃಪ್ತರಾಗಿ ಅವರನ್ನು ಶರಣರು ಹೊಗಳುವುದು ದಾಸಿಮಯ್ಯನಿಗೆ ಇಷ್ಟವಿಲ್ಲ. ಭೂಮಿ, ಬೆಳೆ, ಧಾನ್ಯ , ಅನ್ನ- ಹೀಗೆ ಸಕಲವನ್ನು ಭಗವಂತ ಕರುಣಿಸಿರುವಾಗ, ಏನೊಂದನ್ನು ಸೃಷ್ಟಿಸಲಾಗದ ಹುಲು ಮಾನವರನ್ನು ಹೊಗಳುವವರು ಹೊಗಳುಭಟ್ಟರಷ್ಟೇ ಅಲ್ಲ, ಕೂಳು ಹಾಕುವವರ ಮನೆ ಬಾಗಿಲಿಗೆ ಸುಳಿವ ನಾಯಿಗಿಂತಲೂ ಕೀಳು ಅಂತಹ ಜನ ಎಂದು ಕಟುವಾಗಿ ಟೀಕಿಸಿ 'ಶಿವನಿಲ್ಲದ ತಾಣವಿಲ್ಲ' - ಎಂದಿರುವುದು ಸೂಕ್ತವಾಗಿದೆ. ಹಾಗೆಂದು ಹಸಿದಿರುವಂತೆ ದಾಸಿಮಯ್ಯ ಹೇಳುವುದಿಲ್ಲ, ಏಕೆಂದರೆ ಹಸಿವಿನ ಪರಿ, ಅದರಿಂದ ದೇಹದ ಮೇಲಾಗುವ ಪ್ರತಿಕೂಲ ಪರಿಣಾಮಗಳ ಪರಿಚಯವಿದೆ. ವಾತ, ಪಿತ್ತ, ಸುಸ್ತು , ತಲೆಸುತ್ತು, ಕಣ್ಣು ತಿರುಗಾಗುವುದು - ಹೀಗೆ ಅದರ ಅಪಾಯವೂ ಗೊತ್ತು. ಧರ್ಮರಥ ಚಲಿಸಲು ದೇಹವೆಂಬ ಚಕ್ರಕ್ಕೆ ಊಟವೆಂಬ ಕೀಲೆಣ್ಣೆ ತುಂಬಾ ಅವಶ್ಯಕ. ಅಂತಹ ಹಸಿವು ಹೆಬ್ಬಾವಾದರೆ, ಊಟ ಹಾಕುವವನು ಮಂತ್ರವಾದಿಯೇ ಸರಿ ಎಂದು ಸಾರಿ 'ಅನ್ನದಾತ ಸುಖೀಭವ' ಎಂಬಂತೆ ಹೊಗಳಿರುವುದನ್ನು ನೋಡಬಹುದು.

ಹಸಿವೆಂಬ ಹೆಬ್ಬಾವು ಬಸಿಱ ಬಂದು ಹಿಡಿದಡೆ
ವಿಷವೇರಿತ್ತಯ್ಯ ಆಪಾದ ಮಸ್ತಕಕ್ಕೆ!
ಹಸಿವಿಗನ್ನವನಿಕ್ಕಿ ವಿಷವನಿಳುಹ ಬಲ್ಲಡೆ
ವಸುಧೆಯೊಳಗಾತನೇ ಗಾರುಡಿಗ ಕಾಣಾ ರಾಮನಾಥ.

---

ಒಡೆಯರನೊಡಗೊಂಡು ಬಂದು
ಕೈಗಡಿಗೆಯ ನೀರ ಕೈಯಲಿ ಕೊಟ್ಟು
ಒಡೆಯರೇ ಕಾಲ ತೊಳಕೋ ಎಂಬವನ ಮನೆಗೆ
ಅಡಿಯಿಡಲಾಗದಯ್ಯ ಮೃಡಶರಣರು
ಒಡಲಿಚ್ಚೆಗೆ ಬಡಮನವ ಮಾಡಿ
ಹೊಕ್ಕುಂಬವರ ನೆನಗೊಮ್ಮೆ ತೋರದಿರಾ ರಾಮನಾಥ.

ಅಧಿಕಾರಸ್ಥರನ್ನು, ಶ್ರೀಮಂತರನ್ನು ಓಲೈಸುವುದು ಅಂದಿನಿಂದಲೂ ನಡೆದು ಬಂದ ಪರಿಪಾಠ. ಅತಿ ಮುಖ್ಯಗಣ್ಯರನ್ನು ಸತ್ಕರಿಸುವ ಉದ್ದೇಶ ಮುಖ್ಯವಾಗಿದ್ದು, ಅದರೊಂದಿಗೆ ಇತರ ಕೆಲವು ಜನರನ್ನು ಕರೆದು ಒಂದೇ ಖರ್ಚಿನಲ್ಲಿ ಎರಡು ಕಾರ್ಯ ಮಾಡಿಕೊಳ್ಳುವ ಜನರನ್ನು ಇಂದಿಗೂ ಕಾಣುತ್ತಿದ್ದೇವೆ. ಹೀಗೆ ತನಗೆ ಮುಖ್ಯರಾದವರಿಗೆ ವಿಶೇಷ ಮನ್ನಣೆ ನೀಡಿ 'ಪಂಕ್ತಿಯಲ್ಲಿ ತಾರತಮ್ಯ ಮಾಡಬಾರದು' ಎಂದು ಗೊತ್ತಿದ್ದರೂ ಅವರ ಕೈಗೆ ತಮ್ಮ ಕೈಯಾರೆ ನೀರು ಕೊಟ್ಟು ಕಾಲು ತೊಳೆದು, ತೊಳೆಯಿಸಿ ನಂತರ ಶಿವಶರಣರಿಗೆ 'ಕಾಲತೊಳೆದು ಬನ್ನಿ' - ಎಂದು ನಿರ್ಲಕ್ಷ್ಯದಿಂದ ಹೇಳಿದರೆ ಸ್ವಾಭಿಮಾನ ಬಿಟ್ಟು, ನಾಲಿಗೆ ಚಪಲಕ್ಕೆ ಬಿದ್ದು ಅಂತಹವರ ಮನೆಯಲ್ಲಿ ಶರಣರು ಉಣ್ಣಬಾರದು, ಅಂತಹವರ ಮುಖ ನೋಡುವುದು ಮಹಾಪಾಪ. ಅತಿಥಿ ದೇವೋಭವ - ಎಂಬ ಉಕ್ತಿ ಇದ್ದರೂ ಹಾಕ್ಕಣೆ, ನೂಕ್ಕಣೆ, ಯಾಕ್ಕಣೆ - ಎಂಬ ಸಾರ್ವಕಾಲಿಕ ಸತ್ಯವನ್ನು ದಾಸಿಮಯ್ಯ ಬಿಡಿಸಿಟ್ಟಿದ್ದಾನೆ.

ಇಂದಿಂಗೆಂತು ನಾಳಿಂಗೆಂತೆಂದು ಚಿಂತಿಸಲೇಕೆ?
ತಂದಿಕ್ಕುವ ಶಿವಂಗೆ ಬಡತನವೆ ರಾಮನಾಥ.

ಭವಿಷ್ಯವನ್ನು ಯಾರು ಅರಿಯಾರರು. ನಾಳೆ ಏನು, ಹೇಗೆ ಎಂಬ ಚಿಂತೆ ಸಂಸಾರಿಗನಿಗಿರುವುದು ಸಹಜ. ಆದರೆ ಶರಣರು ನಾಳಿನ ಬಗ್ಗೆ ಚಿಂತಿಸಕೂಡದು. 'ಮರಣವೇ ಮಹಾನವಮಿ' ಅವರ ಪಾಲಿಗೆ. ಅಂತಹುದರಲ್ಲಿ ನಾಳಿನ ಬಗ್ಗೆ ಯೋಚಿಸುವುದು ತರವಲ್ಲ. ಕೂಡಿಡುವುದು ಸದ್ಭಕ್ತನ ಲಕ್ಷಣವಲ್ಲ. ಸರಳ ಜೀವನ ಉದಾತ್ತ ಚಿಂತನೆ ಇರಬೇಕು. ಮನುಷ್ಯನಿಗೆ ಸಿರಿತನ-ಬಡತನ ಬರಬಹುದು. ಆದರೆ ನೀಡುವ ಶಿವನಿಗೆ ಬಡತನವೇ? ಇಲ್ಲ. ದುರಾಸೆಯ ಜನ ಯೋಚಿಸಬೇಕು.

ಮಾರಿಯ ಪೂಜಿಸಿ ಮಸಣಕ್ಕೆ ಹೋಗಿ
ಗೋರಿಗೊಳಿಸಿ ಕುರಿಯ ಕೊರಳನೆ ಕೊಯ್ದುಂಬ
ಕ್ರೂರ ಕರ್ಮಿಗಳನವರ ಶಿವಭಕ್ತರೆನ್ನಬಹುದೇ?

ಆರಯ್ಯದೆ ಅವರ ಮನೆಯಲುಂಡ ಭಕ್ತನು
ಅಘೋರ ನರಕ್ಕಿಳಿವ ಕಾಣಾ ರಾಮನಾಥ.

ಸಕಲ ಜೀವಾತ್ಮಗಳಿಗೂ ಲೇಸನ್ನು ಬಯಸುವುದೇ ಶರಣತತ್ವ. ಪ್ರಾಣಿಹಿಂಸೆಗೆ ಹೇಸಿ ಹುಟ್ಟಿಕೊಂಡಿದ್ದು ವಚನ ಸಾಹಿತ್ಯ. ಹೀಗಿರುವಾಗ ಪ್ರಾಣಿ ಬಲಿ ನೀಡಿ ದೇವರನ್ನು ತೃಪ್ತಿಗೊಳಿಸಿ, ಬಳಿಕ ಅದನ್ನು ರುಚಿಯಾಗಿ ಬೇಯಿಸಿ, ತಿಂದು ತಿಳಿಯದೆ ತಿಂದುಬಿಟ್ಟೆ ಎಂದರೂ ಅಂತಹವನಿಗೆ ರೌರವನರಕ ತಪ್ಪಿದ್ದಲ್ಲ. ಇನ್ನು ದೇವರ ಹೆಸರಿನಲ್ಲಿ ಅವ್ಯಾಹತವಾಗಿ ಪ್ರಾಣಿಹಿಂಸೆ ನೀಡುವವರ ಗತಿ ಏನಾಗುತ್ತದೆ ? ಅಂತಹವರು ಯೋಚಿಸಬೇಕು. ಸಸ್ಯಾಹಾರದಂತಹ ಸಾತ್ವಿಕ ಆಹಾರ ಪೂಜ್ಯ. ಮಾಂಸಾಹಾರ ಅನಾರೋಗ್ಯಕ್ಕೆ ಕಾರಣ- ಎಂದು ಅಂದೇ ದಾಸಿಮಯ್ಯ ಹೇಳಿದ್ದಾನೆ.

ದೇಹಗೊಂಡು ಹುಟ್ಟಿದವರು
ಒಪ್ಪಚ್ಚಿ ದೇಹಾರವ [ಮಾಡಿರಯ್ಯ]
ದೇಹಾರವ ಮಾಡಿ, ಲಿಂಗಾರ್ಪಿತವ ಮಾಡದೆ
ಆಹಾರವ ಕೊಂಡರೆ
ಕೋಳಿ ಹುಳುವನಾಯ್ದು ತಿಂದಂತೆ ಕಾಣಾ ರಾಮಾನಾಥ.

ಆತ್ಮೋದ್ದಾರವಾಗಬೇಕಾದರೆ ದೇಹವು ಶುಚಿಯಾಗಿ, ಆರೋಗ್ಯವಾಗಿ, ದೃಢವಾಗಿ ಇರಬೇಕು. ಹೀಗಿರಬೇಕಾದರೆ ಅಚ್ಚು - ಕಟ್ಟಾಗಿ ಇಟ್ಟುಕೊಳ್ಳಬೇಕು. ಹಾಗೆಯೇ ಆಹಾರ ಸೇವನೆ ತುಂಬಾ ಮುಖ್ಯ. ಆದರೆ ಬದುಕುವುದಕ್ಕಾಗಿ ತಿನ್ನದೆ, ತಿನ್ನುವುದಕ್ಕಾಗಿ ಬದುಕಿ ಹೊಟ್ಟೆಬಾಕರಾದರೆ ಆರೋಗ್ಯ ಕೆಡುವುದಲ್ಲದೆ ಪರಮಾರ್ಥವಿಲ್ಲ. ಊಟ, ನಿದ್ದೆ, ಮೈಥುನ ಎಲ್ಲ ಜೀವಿಗಳಲ್ಲೂ ಇದೆ. ಅಷ್ಟಕ್ಕೆ ಬದುಕಿದರೆ ನಮಗೂ-ಅವಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಕೋಳಿ ಹುಳುವನ್ನು ತಿಂದು ಮತ್ತೊಬ್ಬರಿಗೆ ಆಹಾರವಾಗುವಂತೆ ಆಗುತ್ತದೆ ಸಾಧನೆ ಇಲ್ಲದವನ ಬಾಳು. ಆದ್ದರಿಂದ ದೇಹ-ಮನಸ್ಸುಗಳ ಸ್ವಚ್ಛತೆ ದೇವರ ಹೆಸರಿನಲ್ಲಿ ಮಿತ ಭೋಜನ ಶರಣತ್ವದ ಸಂಕೇತ. ಇಂದಿನ ವೈದ್ಯರು ದೀರ್ಘಾಯುಷ್ಯಕ್ಕೆ ನೀಡುವ ಸಲಹೆಯನ್ನು ದಾಸಿಮಯ್ಯ ಅಂದೇ ನೀಡಿರುವುದು ಆತನ ದೂರದೃಷ್ಟಿಯ ಫಲ.

## (IV) ಪ್ರಾಣಲಿಂಗಿಸ್ಥಲ :

ಇದುವರೆಗೂ ಹೇಳಿದ ಮೂರು ಸ್ಥಲಗಳಲ್ಲಿ ಕರ್ಮ ಪ್ರಾಧಾನ್ಯವಿರುವುದನ್ನು, ಜ್ಞಾನವಿನ್ನೂ ಸಂಪೂರ್ಣ ವಿಕಾಸಹೊಂದದೆ ಗೌಣವಾಗಿರುವುದನ್ನು ಕಾಣಬಹುದಾಗಿದೆ. ಪ್ರಾಣಲಿಂಗಸ್ಥಲದಿಂದ ಮುಂದೆ ಜ್ಞಾನ ಪ್ರಧಾನವಾಗಿ ಕರ್ಮಗೌಣವಾಗುತ್ತದೆ. ಇದುವರೆಗೂ ಆಗಿರುವುದು ದೇಹ ಮನಸ್ಸುಗಳ ಶಿಕ್ಷಣ. ಹೊರಗಿನ ದೇವರು ಒಳಗಿರುವನೆಂದು ತೋರಿಸಿಕೊಟ್ಟಿರುವುದು ಅದರ ಪರಿಣಾಮ. ಮುಂದಿನದು ಆತ್ಮಸ್ವರೂಪಜ್ಞಾನ. ಈ ಹಂತದಲ್ಲಿ ಒಳಗಿನ ಚೈತನ್ಯ ಮೂರ್ತಿಯ ನಿಕಟ ಸಂಬಂಧದಿಂದ ಏನಾಗುವುದುದೆಂಬುದನ್ನು ನೋಡಬಹುದಾಗಿದೆ.

ಇಳೆಯನಾಧಾರವ ಮಾಡಿ
ಜಳವ ಜೀವನವ ಮಾಡಿ
ವಾಯುವ ಕಂಭವ ಮಾಡಿ
[ಅ] ನಳನ ಚಂದ್ರಮನ ಮಡಗಿ
ಆಕಾಶವನು ಗಳಿಗೆ ಮಾಡಿ
ಮುಚ್ಚಿ ಒಳಗಿಪ್ಪ ಭೇದವನು ಭೇದಿಸದ
ಬೆಡಗಿಗೆ ಆನು ಬೇಡಿಕೊಂಬೆ ರಾಮನಾಥ.

ಗಡಿಯಾರವಿಲ್ಲದ ಹಿಂದಿನ ಕಾಲದಲ್ಲಿ ಕಾಲ ನಿರ್ಣಯಿಸಲು ತೂತಾದ ಗಡಿಗೆಯೊಂದರಲ್ಲಿ ನೀರು ತುಂಬಿಟ್ಟು ಅದು ಖಾಲಿಯಾದ ಗಳಿಗೆಯನ್ನು ಪ್ರಮಾಣವನ್ನಾಗಿಸಿಕೊಳ್ಳುತ್ತಿದ್ದರಂತೆ. ಹಾಗೆ ಇಂತಹ ಮಣ್ಣಿನ ಮಡಿಕೆಗೆ ಪಂಚಭೂತಗಳ ಸೃಷ್ಟಿಯನ್ನು ದಾಸಿಮಯ್ಯ ಹೋಲಿಸಿದ್ದಾನೆ. ಇಲ್ಲಿ ಭೂಮಿಯೇ ಹಾಸುಗಲ್ಲು, ವಾಯುವೇ ನಿಲುವುಗಂಬ, ಆಕಾಶವೇ ಗಳಿಗೆ ಬಟ್ಟಲು, ಜಲವೇ ಅಳೆಯುವ ದ್ರವ್ಯ, ಅಗ್ನಿಯೇ ರಂಧ್ರ. ಈ ಬಗೆಯ ವ್ಯವಸ್ಥೆಯನ್ವಯ ಸೂರ್ಯ - ಚಂದ್ರೋದಯವಾಗುತ್ತದೆ. ಎಲ್ಲವೂ ಕ್ರಮಬದ್ದವಾಗಿ ಜರುಗುತ್ತಿದೆ. ಆದರೆ ಇದಕ್ಕೆ ಕಾರಣಕರ್ತನಾದ ಪರಮಾತ್ಮ ಯಾರಿಗೂ ಕಾಣದಂತೆ ಉಳಿದು ಬಿಟ್ಟಿದ್ದಾನೆ. ಕಣ್ಣಿಗೆ ಕಾಣದ ಮಾತ್ರಕ್ಕೆ ದೈವವಿಲ್ಲವೆಂಬುವ ಮೂಢರನ್ನು ಮೂದಲಿಸಿದ್ದಾನೆ ದಾಸಿಮಯ್ಯ.

ಪ್ರಾಣವ ಕಳೆ ಪ್ರಕೃತಿಯಲ್ಲಡಗಿ
ಪ್ರಕೃತಿಯ ಕಳೆ ಪ್ರಾಣನಲ್ಲಡಗಿ
ಪ್ರಾಣನ ಕಳೆಯ, ಪ್ರಕೃತಿಯ ಕಳೆಯ
ಲಿಂಗವೆಂದರಿದು ಅಂಗೈಸಿ ಅನುಭವಿಸಬಲ್ಲವರ
ಲೆಂಗಿ ನಾನಾಗಿಪ್ಪೆನಯ್ಯ ರಾಮನಾಥ.

ಎಳ್ಳು - ಎಣ್ಣೆಯ ರೀತಿ ಪ್ರಾಣದಲ್ಲಿ ಪ್ರಕೃತಿ, ಪ್ರಕೃತಿಯಲ್ಲಿ ಪ್ರಾಣ ಹಾಸುಹೊಕ್ಕಾಗಿ ಅನ್ಯೋನ್ಯವಾಗಿರುತ್ತದೆ. ಈ ಅದ್ವೈತವನ್ನು ಚೈತನ್ಯವೆಂದು, ಜಡವೆಂದು ವಿಂಗಡಿಸುವುದು ಬಾಲಿಶವಾದ ಕಲ್ಪನೆಯೇ ಹೊರತು ವಾಸ್ತವ ಸಂಗತಿಯಲ್ಲ. ಪ್ರಾಣ ಮತ್ತು ಪ್ರಕೃತಿಯ, ಚೈತನ್ಯ ಮತ್ತು ಜಡದ ಬಿಡಿಸದ ಬಂಧವೇ ಲಿಂಗ. ವಿಶ್ವ ಮತ್ತು ವಿಶ್ವನಾಥನ ಒಡನಾಟ. ಹದವರಿತ ಅರಿವು, ಅನುಭಾವ, ಇಂಥ ಅನುಭಾವಿಗಳ ಸೇವೆಯೇ ಆದರಣೀಯ ಮತ್ತು ಆಚರಣೆ ಯೋಗ್ಯ.

ಒಳಗರಿದ ಭಕ್ತನೊಣಗಾದ ಲಿಂಗವು
ಒಳಗಾದ ಲಿಂಗದೊಳಗಾದ ಭಕ್ತ
ಹೊರಗಾದ ಲಿಂಗವನೊಳಗೆ ತಂದಿರಿಸಿದಾ
ಭಕ್ತನ ತನುವಿನ ವಳಯವನಿನ್ನೇನ ಹೇಳುವೆ ರಾಮನಾಥ.

ಯಾವನಿಗೆ ತನ್ನ ಅಂತರಂಗದ ಅರಿವಿದೆಯೋ ಅವನೇ ಶಿವ. ಹಾಗೆ ಅಂತರಂಗದಲ್ಲಿ ಯಾರು ಶಿವನನ್ನು ಪ್ರತಿಷ್ಠಾಪಿಸುವರೋ ಅವನೇ ಶಿವಭಕ್ತ. ಆಕಾಶಕ್ಕಿಂತಲೂ ಅಗಲವಾದ ಮೃಡನ,

ಎತ್ತಪ್ಪೆ ಶರಣಂಗೆ, ತೊತ್ತಪ್ಪೆ ಶರಣಂಗೆ, ಭೃತ್ಯನಾಗಿ ಸದ್
ಭಕ್ತರ ಮನೆಯ ಬಾಗಿಲ ಕಾಯಿದ್ದಪ್ಪ ಸೊಣಗನಪ್ಪೆ.
ಕರ್ತಾರ ನಿನಗೆ ಹೊಡೆವಡುವ ಭಕ್ತರ ಮನೆಯ
ಹಿತ್ತಿಲ ಬೇಲಿಯಾಗಿಪ್ಪೆನಯ್ಯ ರಾಮನಾಥ.

ನಿಜಶರಣನನ್ನು ಎತ್ತಿ ಕೊಂಡಾಡಿ ಮೆರೆಸಬೇಕು. ಅಂತಹವನಿಗೆ ದಾಸನಾದರೂ ತಪ್ಪಿಲ್ಲ. ಸೇವಕನಾಗಿ ಅವನ ಮನೆಯ ಬಾಗಿಲು ಕಾಯುವ ನಾಯಿಯಾಗಬಲ್ಲೆ. ಸೃಷ್ಟಿಕರ್ತ ಶಿವನಿಗೆ ನಮಸ್ಕರಿಸುವ ಭಕ್ತನ ಮನೆಯ ಗಡಿರಕ್ಷಣೆಗೆ ಹಾಕಿದ ಬೇಲಿ ಹೇಗೆ ರಕ್ಷಣೆ ನೀಡುತ್ತದೋ ಹಾಗೆ ಕಾವಲು ಕಾಯುತ್ತೇನೆ. ತಪಸ್ವಿಯ ಮಹಿಮೆ ತಪಸ್ವಿಗೆ ಮಾತ್ರ ತಿಳಿಯುವಂತೆ ಅಂತಹ ನಿಜಭಕ್ತರು ಅಷ್ಟು ವಿರಳರೆ ? ಅಥವಾ ಅಂತಹವರ ಸೇವೆ ಮಾಡಿಯಾದರು ಪುನೀತನಾಗಬೇಕು ಎಂಬ ಆಶಯ ಇಂದಿಗೂ ಪ್ರಸ್ತುತ.

ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿದ್ದಡೇನು
ಅದು ಪಟ್ಟಣವೆಂದೆನಿಸುವುದು
ನಿಷ್ಠೆಯಿಲ್ಲದ ಭಕ್ತ ಪಟ್ಟಣದಲ್ಲಿದ್ದರೂ - ಅದು
ನಟ್ಟಡವಿ ಕಾಣಾ ರಾಮನಾಥ.

ಪ್ರಾಮಾಣಿಕ ಭಕ್ತರೇ ಹಾಗೆ. ಅವರೊಂದು ಜೀವಂತಲಿಂಗ, ಪರುಷಮಣಿ ಇದ್ದಂತೆ. ಅಂತಹವರು ಎಲೆ ಮರೆಯ ಕಾಯಿಯಂತೆ ಕಾಡಿನ ಮಧ್ಯೆ 'ತಾನಾಯಿತು, ತಾನು ಮೇಯುವ ಸೊಪ್ಪಾಯಿತು' ಎಂಬಂತೆ ಇದ್ದರೂ ಅವರ ಕೀರ್ತಿಗಂಧ ಎಲ್ಲೆಡೆ ಪಸರಿಸದೆ ಇರುವುದಿಲ್ಲ.ಪರಿಣಾಮ ಅಂತಹ ಭಕ್ತರ ಸುತ್ತ ಜನ ನೆರೆದು ಅದೊಂದು ಸಂತೆ, ಪಟ್ಟಣವೇ ಆಗಿ ಬಿಡುತ್ತದೆ. ನಿಷ್ಠೆ ಇಲ್ಲದ ಭಕ್ತ ಜನರ ಮಧ್ಯೆ ಇದ್ದರೂ 'ತುಂಬಿದ ಜಾತ್ರೆಯಲ್ಲಿ ತುಂಡಗಿಯವನನ್ನು ಕಂಡಂತೆ' ಆಗುತ್ತದೆ, ಅಷ್ಟೇ. ಸತ್ಯಕ್ಕೆ ಸಾವಿಲ್ಲ ಎನ್ನುವುದು ಇದಕ್ಕೆ.

ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು
ಹೊಂದಿಯೂ ಹೊಂದದಿರ್ದ ಭೇದವನು
ಲಿಂಗದೊಳಗೆ ಶರಣ ಸಂದಿರ್ದ ಭೇದವನು
ಲೋಕದ ಸಂದೇಹಿಗಳೆತ್ತ ಬಲ್ಲರೇ ರಾಮನಾಥ ?

ಈ ಜಡದೇಹದಲ್ಲಿ ಮನೆ ಮಾಡಿರುವವನು ಶಿವ. ಬಿಂದುವೆಂದರೆ ದೇಹ, ನಾದವೆಂದರೆ ಜೀವ. ತನ್ನ ಶರೀರದಲ್ಲಿ ಜಡ-ಚೈತನ್ಯ ಎರಡನ್ನೂ ಹೊಂದಿರುವ ಮನುಜ ಜಡದ ವಿಜೃಂಭಣೆಗೆ ಮನಸೋತರೆ ಹಾಳಾಗುತ್ತಾನೆ. ಚೈತನ್ಯಕ್ಕೆ ಇಂಬು ಕೊಟ್ಟರೆ ಆತ್ಮೋದ್ಧಾರವಾಗುತ್ತದೆ, ಶಿವನಾಗುತ್ತಾನೆ. ಪರಿಣಾಮ ಬಿಂದು ಸಿಂಧುವಾಗಿ ಪೀಠವಾಗುತ್ತದೆ, ನಾದ 'ಲಿಂಗ'ವಾಗುತ್ತದೆ. ಕ್ಷಣಿಕ ಸುಖಕ್ಕೆ ಹಾತೊರೆದು ಬದುಕನ್ನು ಕೆಡಿಸಿಕೊಳ್ಳುತ್ತಿರುವ ಇಂದಿನ ಯುವಜನತೆಗೆ ಈ ವಚನ ದಾರಿದೀಪ.

ಮೊಲೆ-ಮುಡಿ ಬಂದರೆ ಹೆಣ್ಣೆಂಬರು.
ಗಡ್ಡ - ಮೀಸೆ ಬಂದರೆ ಗಂಡೆಂಬರು.
ನಡುವೆ ಸುಳಿವಾತ್ಮನು
ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥ.

ಸ್ತ್ರೀಯರ ಸ್ವತಂತ್ರ ಅಭಿವ್ಯಕ್ತಿಗೆ ನಾಂದಿ ಹಾಡಿದ್ದು ವಚನ ಸಾಹಿತ್ಯ . ಶತ-ಶತಮಾನಗಳಿಂದ ಸಂಕೋಲೆಯಲ್ಲಿದ್ದ ಹೆಂಗಸರು ವಚನದಲ್ಲಿ ಮುಕ್ತಿ ಹೊಂದಿದರು. ಪ್ರಾಯಕ್ಕೆ ಬಂದ ಹೆಣ್ಣಿಗೆ ಸ್ತನ, ನಿತಂಬದಂತಹ ಅಂಗಗಳು ಪುಷ್ಟಿಗೊಂಡು, ಉದ್ದನೆಯ ಜಡೆ ಬೆಳೆಸುವರು. ಹಾಗೆ ಹರೆಯಕ್ಕೆ ಬಂದ ಹುಡುಗನಿಗೆ ಗಂಟಲು ಬಿರಿದು, ಮುಖದ ಮೇಲೆ ಕೂದಲು ಬೆಳೆದು ಗಡ್ಡ -ಮೀಸೆ ಎಂಬ ವಿಭಾಗವೇರ್ಪಡುವುದು. ಆದರೆ ಪ್ರಕೃತಿ ಹೆಣ್ಣನ್ನು ಕಡೆ ಎಂದಾಗಲಿ, ಕೀಳೆಂದಾಗಲಿ ಎಲ್ಲೂ ಹೇಳಿಲ್ಲ . ಹಾಗೆ ಗಂಡಿಗೆ ವಿಶೇಷ ಪ್ರಾಣ, ಶಕ್ತಿಯೇನಿಲ್ಲ . ಸೃಷ್ಟಿಕರ್ತನ ನಿರ್ಮಾಣದಲ್ಲಿ ಸ್ಥೂಲವಾಗಿ ಮನುಷ್ಯಜಾತಿ ಅಷ್ಟೆ. ನೋವು -ಜೀವದಲ್ಲಿ ವ್ಯತ್ಯಾಸವೇನೂ ಇಲ್ಲ. ಆತ್ಮೋದ್ಧಾರಕ್ಕೆ ಲಿಂಗಭೇದವಿಲ್ಲ . ಇಚ್ಛಾಸಕ್ತಿ ಮುಖ್ಯ .
ಹೆಣ್ಣನ್ನು ಕೀಳಾಗಿ ಕಾಣುವ, ಮೂದಲಿಸುವ ದುರಭಿಮಾನಿಗಳಿಗೆ ಹೇಗಿದೆ ದಾಸಿಮಯ್ಯನ ಚಾಟಿ ಏಟು !?

ಚಿನ್ನದೊಳಗಣ ಬಣ್ಣವ ಆ ಚಿನ್ನ ತನ್ನ ತಾನರಿವುದೇ ?
ಕಬ್ಬು ರುಚಿಸಬಲ್ಲುದೇ ತನ್ನ ತಾನೇ ?
ಈ ಪರಿಯಂತೆ ನರರರಿವರೇ ಕ್ರಿಯಾಜ್ಞಾನಭೇದವ ರಾಮನಾಥ.

ಸುವರ್ಣ ತನ್ನೊಳಗಿನ ಕಾಂತಿಯನ್ನಾಗಲಿ, ಮೌಲ್ಯವನ್ನಾಗಲಿ ತಾನೇ ತಿಳಿದಿರುವುದಿಲ್ಲ. ತನ್ನೊಡಲಲ್ಲಿ ಸಿಹಿರಸವನ್ನು ತುಂಬಿಕೊಂಡಿದ್ದರೂ ಅದರ ಪರಿಯಾಗಲಿ, ರುಚಿಯಾಗಲಿ ಸ್ವತ ಕಬ್ಬಿಗೇ ಗೊತ್ತಿರುವುದಿಲ್ಲ. ಇದೇ ರೀತಿ ತನ್ನೊಳಗಿರುವ ಕ್ರಿಯೆಯ ಮಹತ್ವವನ್ನಾಗಲಿ, ಜ್ಞಾನದ ಅಗತ್ಯವನ್ನಾಗಲಿ ಅಥವಾ ಇವುಗಳ ನಡುವಿನ ವ್ಯತ್ಯಾಸವನ್ನು ಮನುಷ್ಯರು ಅರಿಯಲಾರರು. ಅರಿವಿಗೆ ಗುರುವಿನ ಕರುಣೆ ಅಗತ್ಯ .

ಗುರುವಿನ ಮಹತ್ವ ತಿಳಿಯದೆ ಎಲ್ಲವನ್ನು ತಾನೇ ತಿಳಿದಿದ್ದೇನೆಂದು ದುಡುಕಿ ತೊಂದರೆಗೀಡಾಗುವವರು ಈ ಕುರಿತು ತಾಳ್ಮೆಯಿಂದ ಯೋಚಿಸಬೇಕು.

ಬಯಲ ಬಣ್ಣವ ಮಾಡಿ
ಸಯುವ ನಿಲವ ಮಾಡಿ
ಸುಳಿವಾತನ ಬೆಡಗ ಬಲ್ಲರಾರೈ ರಾಮನಾಥ!

ಶರೀರ ಸ್ವರೂಪಕ್ಕೆ ನಿರಾಕಾರ ಸ್ವರೂಪಿಯಾದ ಪರಶಿವನೇ ಕಾರಣ. ಅವನ ಸಂಕಲ್ಪ ಕುಂಚ ಸ್ಪರ್ಶ ಮಾತ್ರದಿಂದ ಶೂನ್ಯವೂ ರೇಖೆ ಪಡೆಯಿತು, ನಿರಾಕಾರವೂ ರೂಪ ಪಡೆಯಿತು. ಅವರ್ಣನೀಯವೂ ಬಣ್ಣ ತುಂಬಿತು, ಹೀಗೆ ಶಿವನು ಆಧಾರವೂ ಅಧೇಯವೂ ಆಗಿ ಜಡವೂ-

ಚೇತನವೂ ಆಗಿ ಕಡೆಗೆ ಸರ್ವವೂ ತಾನಾಗಿ, ಇಡೀ ವಿಶ್ವವನ್ನೆ ಹಲವು ಪ್ರಕಾರಗಳಿಂದ ತುಂಬಿ ತುಳುಕಿರುವ, ಬುದ್ಧಿ ಬಾಹುಗಳಿಂದ ಆಕ್ರಮಿಸಬಲ್ಲ ಪರಾಕ್ರಮಿಗಳು ವಿರಳ. ಈ ಭೌತಿಕ ಶರೀರ ಮಣ್ಣಾದರೂ ಸಾಧನೆ-ಸಿದ್ಧಿಯಿಂದ ಅಮರರಾಗಬಹುದು ಜನರು ಶಿವನಂತೆ.

ಆಡಬಾರದ ಬಯಲು, ಸೂಡ ಬಾರದ ಬಯಲು
ನುಡಿಯಬಾರದ ಬಯಲು ಹಿಡಿಯ ಬಾರದ ಬಯಲು
ಈ ಒಡಲಿಲ್ಲದ ಬಯಲೊಳಡಗಿಪ್ಪ ಭೇದವ
ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥ.

ಬಯಲೆಂದರೆ ಶೂನ್ಯ , ಶೂನ್ಯವೆಂದರೆ ಪೂಜ್ಯ , ಪೂಜ್ಯವೆಂದರೆ ಪರಬ್ರಹ್ಮ. ಅದನ್ನು ಅಟ್ಟು; ಉಣ್ಣಲು ಬಾರದು. ಸುಟ್ಟು ತಿನ್ನಲಾಗದು. ನುಡಿಸಿ ಒಲಿಸುವೆನೆಂದರೆ ಅರ್ಥ - ವರ್ಣ - ಪದ-ವಾಕ್ಯ ಒಂದು ತಿಳಿಯದು. ಹೀಗೆ ಯಾವ ಬಗೆಯಲ್ಲೂ ಸಿಗದ, ನಮ್ಮ ಜೀವ ಕಣ-ಕಣದಲ್ಲೂ ತುಂಬಿರುವ ಪರಬ್ರಹ್ಮವನ್ನು ಜಡಜನರು ಹೇಗೆ ಬಲ್ಲರು ? ಅದರ ಅರಿವು ಶರಣರಿಗೆ ಮಾತ್ರ ಇದೆ.

## (V) ಐಕ್ಯಸ್ಥಲ :

ಐಕ್ಯಸ್ಥಲದ ಸ್ಥಿತಿಯಲ್ಲಿ ಪೂಜೆ ಮಾಡುವವರಾರು ? ಪೂಜೆಗೊಳ್ಳುವವರಾರು ? ಜ್ಞಾತೃ, ಜ್ಞಾನ, ಜ್ಞೇಯಗಳೆಲ್ಲಿಯದು? ಇದೇ ಐಕ್ಯಸ್ಥಲ. ಒಂದು ವಸ್ತು ಎರಡಾಗಿ, ಪುನಃ ಅಂತರಂಗದಲ್ಲಿ ಸೇರಿ ಒಂದಾಗಿ ಸಂಪೂರ್ಣ ಸಾಮರಸ್ಯ ಐಕ್ಯವಾಗುವುದು.

ಒಡಲೊಳಗಣ ಕಿಚ್ಚು ಒಡಲ ಸುಡದ ಭೇದವನು
ಕುಡಿದುದಕದಲಿ ಆ ಕಿಚ್ಚು ನಂದದ ಭೇದವನು
ಮೃಢನೇ ಪ್ರಾಣ-ಪ್ರಕೃತಿಯೊಳಗೆ ನೀನಡಗಿಪ ಭೇದವನು
ಲೋಕದ ಜಡಜೀವಿಗಳೆತ್ತ ಬಲ್ಲರೈ ರಾಮನಾಥ?

ದೇಹದಲ್ಲಿ ಉದರಾಗ್ನಿಯು ಇದ್ದರೂ ಆ ಅಗ್ನಿಯು ದೇಹವನ್ನು ಸುಡದಂತೆ ಗೌಪ್ಯವಾಗಿ ಇರುವಂತೆ, ಹಾಗೆ ನೀರು ಮತ್ತಿತರ ದ್ರವ ಪದಾರ್ಥವನ್ನು ಸೇವಿಸಿದರೂ ಆ ಬೆಂಕಿ ಆರದಂತೆಯೂ ಇರುವುದಕ್ಕೆ ಶಿವನೇ ಕಾರಣ. ಹೀಗೆ ಆ ದೇಹದಲ್ಲಿ ಶಿವನಿದ್ದರೂ ಆ ವ್ಯಕ್ತಿಯ ವರ್ತನೆಯಲ್ಲಿ ಬೆರೆಯದೆ ನಿಗೂಢವಾಗಿರುವ ವಿಚಾರವನ್ನು ಈ ಲೋಕದ ಸಾಮಾನ್ಯ ಜನರು ಹೇಗೆ ತಿಳಿಯಲು ಸಾಧ್ಯ? ಅದರ ಅರಿವು ಆಸ್ತಿಕರಿಗೆ ಮಾತ್ರ ಉಂಟಾಗುತ್ತದೆ.
ಶರೀರ ಪ್ರಕೃತಿ ರಹಸ್ಯಗಳನ್ನು ಇಂದಿಗೂ ಪೂರ್ಣ ತಿಳಿಯಲು ವಿಜ್ಞಾನಕ್ಕೆ ಸವಾಲಾಗಿರುವ ಶರಣರು ಅಂದೇ ತಿಳಿದು ವಿವರಿಸಿದ್ದು ವಿಸ್ಮಯ.

ತಾಯ ಗರ್ಭದ ಶಿಶು ತಾಯ ಕುರುಹನರಿಯದು
ಆ ತಾಯಿ ಶಿಶುವಿನ ಕುರುಹನೆಂದೂ ಅರಿಯದು
ಮಾಯಾಮೋಹದಲ್ಲಿಪ್ಪ ಭಕ್ತರು ದೇವರನರಿಯರು
ಆ ದೇವರು ಆ ಭಕ್ತರನೆಂದೂ ಅರಿಯನು ಕಾಣಾ ರಾಮನಾಥ.

ಗರ್ಭಿಣಿಯ ಹೊಟ್ಟೆಯೊಳಗಿನ ಶಿಶುವಿಗೆ ತನ್ನ ತಾಯಿಯ ಮುಖದ ಕಲ್ಪನೆ ಇರುವುದಿಲ್ಲ. ಆ ತಾಯಿಗೂ ತನ್ನ ಗರ್ಭದೊಳಗಿರುವ ಶಿಶುವಿನ ರೂಪ ಲಕ್ಷಣವಾಗಲಿ, ಲಿಂಗವಾಗಲಿ ತಿಳಿಯುವುದಿಲ್ಲ. ಹಾಗೆಯೇ ಸರ್ವಾಂತರ್ಯಾಮಿ ಭಗವಂತನು ಎಲ್ಲಾ ಕಡೆಯೂ ಇದ್ದರೂ ವಿಷಯ ಸುಖದಲ್ಲಿ ತಲ್ಲೀನರಾದ ಜನರಿಗೆ ಕಾಣಿಸುವುದಿಲ್ಲ. ಅಂತೆಯೇ ದೇವರಿಗೂ ಆ ಭಕ್ತರ ಪರಿಚಯ ಇಲ್ಲ, ಬೇಕೂ ಇಲ್ಲ.

ಉಂಕೆಯ ನಿಗುಚಿ, ಸರಿಗೆಯ ಸಮಗೊಳಿಸಿ,
ಸಮಗಾಲನಿಕ್ಕಿ (ಅಣಿಯೊಳೆರಡ) ಮೆಟ್ಟದೆ,
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು.
ಈ ಸೀರೆಯ ನೆಯ್ದವ ನಾನೊ ನೀನೋ ರಾಮನಾಥ?

ಮನೆ ಮನೆಗೆ ಮಗ್ಗ, ಹಾಸಿದೆ ಲಿಂಗನೂಲು, ತನ್ನಂಗವನ್ನೇ ನವುರಾಗಿ ನೂತು ಅಡ್ಡನೂಲು ಮಾಡಿ ನೆಯ್ಯಬೇಕು ತನ್ನಂತರೀಯವೆಂಬ ಉತ್ತರೀಯವನ್ನು. ಅದರ ಅಂಚು ಅಂಚಿಗೂ ಸರಿಗೆ ಮಿಂಚಬೇಕು. ಜ್ಞಾನ-ಕ್ರಿಯೆಗಳ ಸಮಗಾಲನಿಕ್ಕಿ, ಸಂಕಲ್ಪ ವಿಕಲ್ಪದ ಅಡಿಪಟ್ಟಿಗಳನ್ನು ತುಳಿದು, ದೃಢಮನಸ್ಸಿನ ಲಾಳಿಯೊಳಗಿಟ್ಟ ಪ್ರಾಣ ಕಂಡಿಕೆಯನ್ನು ಬೀಸಿ ನೆಯುತ್ತಿರಲು ದೇಹನೂಲೂ ಮುಗಿಯುವುದು- ಉಳಿಯುವುದು ಶಿವನ ಶೇಷ ಪ್ರಸಾದವಾದ - ದಿವ್ಯ ಜೀವನ ವಸ್ತ್ರಮಾತ್ರ. ಇಂಥ ವಸ್ತ್ರವನ್ನು ನೇದವನು ತಾನೆಂಬ ಹಮ್ಮಿಲ್ಲ ಜೀವಕ್ಕೆ. ಆ ಜೀವಕ್ಕೆ ಜೀವ ಜಾಲವೆಲ್ಲಾ ಜೀವಂತ ಶಿವನಾಗಿ ಕಾಣುತ್ತಿರುವುದರಿಂದ. ತನ್ನ ವೃತ್ತಿ, ಕುಲಕಸಬನ್ನು ಕಾವ್ಯವಾಗಿಸಿದ್ದಾನೆ ದಾಸಿಮಯ್ಯ. ಯಾವ ಮನುಷ್ಯನು ತನ್ನ ಪೂರ್ವಾಶ್ರಮ, ಪರಿಸರ ಬಿಟ್ಟು, ಬರೆದು ಮಹಾನ್ ಸಾಹಿತಿಯಾಗಿಲ್ಲ!

ಸ್ಥೂಲದಿಂದ ದೃಷ್ಟ
ಸೂಕ್ಷ್ಮದಿಂದ ಅದರ ಸುಸಂಗ
ಕಾರಣದಿಂದ ವಾಮಭ್ರಮೆ.
ಇಂತಿ ತನುತ್ರಯಗಳ ಕಳೆದು
ನಿಜದ ಉಳುಮೆಯಲಿ ಒಡಗೂಡಬೇಕು ವೀರ ಶೂರ ರಾಮನಾಥನ.

ಈ ಪಿಂಡಾಂಡವನ್ನು ದೇಹವೆಂದು-ಮನಸ್ಸೆಂದು ಮುಖ್ಯವಾಗಿ ಎರಡು ಭಾಗ ಮಾಡಬಹುದು. ಮನಸ್ಸಿನಲ್ಲಿ ಒಳಮನಸ್ಸು ಎಂಬ ವಿಭಾಗವಿರುವುದು. ಈ ಮೂರು ಕ್ರಮವಾಗಿ ಸ್ಥೂಲಶರೀರ, ಸೂಕ್ಷ್ಮ ಶರೀರ, ಕಾರಣ ಶರೀರ ಎಂದು ಕರೆಯಬಹುದು. ಈ ಮೂರೂ ಸ್ತರದಲ್ಲೂ ಲಂಪಟಗುಣ ಇದ್ದೇ ಇರುತ್ತದೆ. ಸಂಸಾರ ದುಸ್ಸಂಗ ತ್ಯಜಿಸುವುದರಿಂದ ಅದರ ಪರಿಣಾಮಗಳಾದ ತ್ಯಾಗಾಂಗ-ಭೋಗಾಂಗ ಕಳೆದು ಯೋಗಾಂಗವೆಂಬ ಭಾವಲಿಂಗ ಅವತರಿಸಿ ಆತನ ಅಂಗವೆಲ್ಲಾ ಲಿಂಗವಾಗಿ ಅವನೇ ಮುಕ್ತನಾಗುತ್ತಾನೆ. ಇದನ್ನೇ ಕುರಿತು ದೇವರದಾಸಿಮಯ್ಯ "ನಿಜದ ಉಳುಮೆಯಲಿ ಒಡಗೂಡ ಬೇಕು"- ಎಂದಿದ್ದಾನೆ. ದೇಹವನ್ನು ದಂಡಿಸದೆ ಸ್ವರ್ಗಕ್ಕೋಗಲು ಸಾಧ್ಯವೇ? ತ್ಯಾಗವಿಲ್ಲದ ಪೂಜೆ ಮಹಾ ಪಾಪ ಎಂದಿದ್ದಾರೆ ಮಹಾತ್ಮ ಗಾಂಧೀಜಿ.

ಅನುಭಾವವಿಲ್ಲದೆ ಈ ತನು ಎಳೆತಟುವಾದುದಯ್ಯ
ಅನುಭಾವವೀ ತನುವಿಗಾಧಾರ
ಅನುಭಾವರ ಅನುಭಾವವ ಮನಸಾರೆ ವೇದಿಸಿದವರಿಗೆ
ಜನನವಿಲ್ಲ ಕಾಣಾ ರಾಮನಾಥ.

ದಾರಿಯಲ್ಲಿ ಗಾಡಿಯಾಗಲಿ, ನೀರಿನಲ್ಲಿ ದೋಣಿಯಾಗಲಿ, ನಿಶ್ಚಲವಾಗಿ ಮುಂದೆ ಸಾಗಬೇಕಾದರೆ ಅವಕ್ಕೆ ಹಿಂದೆ-ಮುಂದೆ ತೂಕವಿರಬೇಕು. ಇಲ್ಲದಿದ್ದರೆ ಬೇಗನೆ ಮಗುಚಿಕೊಳ್ಳುತ್ತದೆ. ಆ ಕಾರಣದಿಂದ ಬಂಡಿಯಲ್ಲಿ ಭಾರದ ಸಾಮಾನು ಇಲ್ಲದಿದ್ದರೆ ಒಂದು ಕಲ್ಲನ್ನಾದರೂ ಇಡುತ್ತಾರೆ. ಅದಕ್ಕೆ 'ಬಣ್ಣುಂಡು' ಎನ್ನುವರು. ಮುಕ್ತಿಯ ದಾರಿಯಲ್ಲಿ ಸಾಗುತ್ತಿರುವವರಿಗೆ 'ಅನುಭಾವ'ವೇ ಸಮತೂಕ. ಬದುಕಿಗೆ 'ಅನುಭಾವ'ದ ನುಡಿ ಅಗತ್ಯ. ಇಂತಹ ಅನುಭಾವಿಗಳ, ಅನುಭಾವವನ್ನು ಅರಿತು ನಡೆದವರಿಗೆ ಮೋಹವಳಿದು, ಭ್ರಮೆಕಳೆದು ಜನನ-ಮರಣದ ಬಾಧೆ ತೊಲಗಿ ಮೋಕ್ಷ ಲಭಿಸುತ್ತದೆ.

ಎಲ್ಲವನ್ನೂ ಸ್ವ-ಅನುಭವದಿಂದ ಕಲಿಯುವಷ್ಟು ದೀರ್ಘವಲ್ಲ ಬದುಕು. ಕೆಲವನ್ನು ನೋಡಿ, ಹಲವನ್ನು ಕೇಳಿ, ಬಂದುದನ್ನು ಅನುಭವಿಸಿ ಪೂರ್ಣತೆಯೆಡೆಗೆ ಸಾಗಬೇಕು. ಈ ಒಂದರಿವು, ಒಂದು ನಡೆ, ಒಂದು ಸ್ಥಾನದೊಳಗೆ

ಬಂದು ಮುಂದೆ ಪ್ರಸಾದದಂತುವನರಿದಡೆ
ನಿಶ್ಚಿಂತ ಪರಶಿವನು ರಾಮನಾಥ.

ನಾವು ಒಂದು ಕಡೆ ಇದ್ದಮೇಲೆ ಒಂದು ತಿಳುವಳಿಕೆ, ನಡವಳಿಕೆ ಪರಸ್ಪರ ಇರಬೇಕು. ತಿಳುವಳಿಕೆಯೆ ಮೊಸರಾಗಿ, ನಡವಳಿಕೆಯೆ ಕೆನೆಯಾಗಿ, ಕಾಲದಂಡವೆ ಮಂಥಾಗಿ ಕಡೆಗೆ ಬೆಣ್ಣೆಯಾಗುವುದು. ಈ ಬೆಣ್ಣೆಯೇ ಪ್ರಸಾದ. ಪ್ರಸಾದ ತಿಂದ ಜೀವ ಪ್ರಸನ್ನ. ಪ್ರಸನ್ನಗೊಂಡ ಜೀವವೇ ಶಿವ ತಾಣ.

ಹೀಗೆ ಪಟ್ಸ್ಥಲದ ಒಂದೊಂದು ಮೆಟ್ಟಿಲಿನಲ್ಲೂ ಆರಾರು ಒಳಪಂಗಡಗಳನ್ನು ಮನಸ್ಸಿನ ಹದವರಿತು ಮಾಡಬಹುದಾಗಿದೆ. ಮುಂದೆ ಮೂವತ್ತಾರು ಸ್ಥಲಗಳು ಏರ್ಪಟ್ಟು ಮತ್ತೆ ಮೂವತ್ತಾರು ಸ್ಥಲಗಳಲ್ಲಿ ಒಳ ಭೇದಗಳಾಗುತ್ತವೆ. ಕೊನೆಗೆ 217 ಸ್ಥಲಗಳಾಗುತ್ತವೆ. ಈ ವಿಂಗಡಣೆಯಲ್ಲದೆ 101 ಸ್ಥಲಗಳೆಂದು ಇನ್ನೊಂದು ಬಗೆಯಲ್ಲೂ ಅಂಗಸ್ಥಲ-ಲಿಂಗಸ್ಥಗಳನ್ನು ವಿಂಗಡಿಸುತ್ತಾರೆ. ಆದರೆ ವಚನ ಸಾಹಿತ್ಯ ಭೀಷ್ಮರಾದ ದಾಸಿಮಯ್ಯನವರ ವಚನಗಳನ್ನು ಪಟ್ಸ್ಥಲಾನುಸಾರಿಯಾಗಿ ವಿಂಗಡಿಸದಿದ್ದರೂ ಅವರ ವಚನಗಳಲ್ಲೆ ಈ ಅಂಶ 'ನೊರೆವಾಲೊಳಗೆ ಇರುವ ತುಪ್ಪದಂತೆ' ಅಂರ್ಗತವಾಗಿದೆ. ಹೀಗೆ ಸೀಮಿತ ಸಂಪನ್ಮೂಲದ ಮೂಲಕ ಗುರಿ ಸಾಧಿಸಿ ಕಾಯಕದ ಮಹತ್ವ ತಿಳಿಸಿದ ಶರಣರು ತೋರ್ಪಡಿಕೆಯ ಲಿಂಗ ಧರಿಸುವ ಪದ್ಧತಿಯನ್ನು ಎಂದೂ 'ಭಕ್ತಿ' ಎಂದು ಭಾವಿಸಲಿಲ್ಲ. ಜಾತಿ-ಧರ್ಮದ ಕಟ್ಟಳೆ ಮೀರಿ ಬದುಕಿದವರು ಅದರ ಅಪಾಯ ಅರಿತವರು ಮತ್ತೆ ಜಾತಿಸಂಕೋಲೆಗೆ ಪ್ರೋತ್ಸಾಹಿಸಲಿಲ್ಲ. ಆದರೂ ದಾಸಿಮಯ್ಯನಂತಹ ಹಿರಿಯನ ವಚನಗಳಲ್ಲಿ ಆಗಾಗ ಬರುವ

ಲಿಂಗದ ಪ್ರಸ್ತಾಪವನ್ನು ಪ್ರಕ್ಷಿಪ್ತವೆನ್ನದೆ ವಿಧಿ ಇಲ್ಲ. ಸಿದ್ದರಾಮನಂತಹ ಶರಣನಿಗೆ ಅವನಿಗಿಂತ ಕಿರಿಯರಿಂದ ಲಿಂಗಧಾರಣೆ ಮಾಡಿಸಿದ ಸಂದರ್ಭ ಸೃಷ್ಟಿಸಿದವರಿಗೆ ದಾಸಿಮಯ್ಯನ ವಚನಗಳಲ್ಲಿ 'ಲಿಂಗ' ಸೇರಿಸುವ ಅಥವಾ ಧರ್ಮದ ಆಶಯಗಳುಳ್ಳ ವಚನ ಸೇರಿಸುವುದು ಕಷ್ಟವಲ್ಲ.

ಆದರೂ ವಚನ ಸಾಹಿತ್ಯದ ಹಿರಿಯಜ್ಜನಾದ ದಾಸಿಮಯ್ಯನ ವಚನಗಳಲ್ಲೇ 'ಷಟ್‌ಸ್ಥಲ'ದ ಅಂಶಗಳು ಬೇರ್ಪಡಿಸಲಾರದಂತೆ ಅಡಕಗೊಂಡಿದ್ದು ವಿಭಾಗ ಕ್ರಮಕ್ಕೆ ನಿಲುಕದೆ ಮೀರಿ ನಿಂತಿವೆ ಎಂಬುದು ಸತ್ಯವಾದ ಸಂಗತಿ.

## ಉಪಸಂಹಾರ :

ಹೀಗೆ ಜೇಡರ ದಾಸಿಮಯ್ಯನು ತನ್ನ ನಂತರ ಬಂದ ವಚನಕಾರರ ಮೇಲೆ ಅಪಾರ ಪ್ರಭಾವ ಬೀರಿದ್ದರೂ ಆಧುನಿಕ ಕವಿಗಳು ಸಹ ದಾಸಿಮಯ್ಯನ ಜೀವನ ಮತ್ತು ವಿಚಾರಧಾರೆಯಿಂದ ಪ್ರಭಾವಿತರಾಗಿದ್ದಾರೆ ಎಂಬುದಕ್ಕೆ ಸು.ರಂ. ಎಕ್ಕುಂಡಿಯವರ ' ದಾಸಿಮಯ್ಯ ಮತ್ತು ಬೆಕ್ಕು ' ಈ ಕಥನ ಕವನವೇ ಸಾಕ್ಷಿ.

ಬರು ಸಟೆಗನ ಭಕ್ತಿ ದಿಟವೆಂದು ನಚ್ಚಲು ಬೇಡ :
ಮಠದೊಳಗಣ ಬೆಕ್ಕು ಇಲಿಯ ಕಂಡು
ಪುಟನೆಗೆದಂತಾಯಿತ್ತು ಕಾಣಾ ರಾಮನಾಥ.

ಎಂಬ ಈ ವಚನವೇ ಇಡೀ ಕಥನ ಕವನಕ್ಕೆ ಸ್ಫೂರ್ತಿ ಯಾಗಿರುವುದನ್ನು ಇಲ್ಲಿ ಕಾಣಬಹುದು. ದಾಸಿಮಯ್ಯ ವೃತ್ತಿಪರತೆ ಇಂತಿದೆ :

ಕಾಯಕವೆ ಶಿವಪೂಜೆ ಎಂದು ನಂಬಿದ ಭಕ್ತ
ದಾಸಿಮಯ್ಯನ ಪೂಜೆಗಿಲ್ಲ ಗಡುವು
ಹಗಲಿರುಳು ಹೊಯ್ದಿರುವ ಮಗ್ಗದಲಿ ಮುಳುಗಿ
ಗದ್ದುಗೆಯ ಕಾಣಲೂ ಇಲ್ಲ ಬಿಡುವು.

★★

ಒಂದು ದಿನ ದಾಸಿಮಯ್ಯ ಮಠಕ್ಕೆ ಬಂದಾಗ ಅವನನ್ನು ಕಂಡ ಜನ ಅಣಕ ಮಾಡುತ್ತ –

ಏನು ಬಂದಿರಿ ದಾಸಿಮಯ್ಯಗಳೆ ? ಹದುಳವೆ ?
ನೆನಪಾಯಿ ಬಿಲ್ವಮಠವು ನಿಮಗೆ ?
ಕುಹಕದಲಿ ಕೇಳಿರಲು ಸುಮ್ಮನೆ ಕುಳಿತಿದ್ದ
ದಾಸಿಮಯ್ಯನು ಜನರ ನಗೆಯ ನಡುವೆ

ಹೀಗಿರಲು ಗದ್ದುಗೆಯ ಬಳಿ ಧ್ಯಾನದಲ್ಲಿರುವಂತೆ ಕಣ್ಣು ಮುಚ್ಚಿ ಕೂತಿದ್ದ ಬೆಕ್ಕು ಇಲಿಯನ್ನು ಕಂಡ ಕೂಡಲೆ ಛಂಗನೆ ಹಾರಿ ಅದನ್ನು ಹಿಡಿದು ಕೊಂಡಾಗ ದಾಸಿಮಯ್ಯನು

ಬಿಲ್ವಮಠ ಈಗೀಗ ಬಿಲದ ಮಠವಾಗಿಹುದು
ಯಾರಲ್ಲಿಯೂ ಇಲ್ಲ ಶಿವನ ಹುಚ್ಚು
ಸಿಕ್ಕಿದ್ದು ಸಿಕ್ಕಷ್ಟು ಮುಕ್ಕಿ ಕಣ್ಮರೆಯಾಗಿ
ಬದುಕಿರುವ ಇಲಿಗಳೆ ಇಲ್ಲಿ ಹೆಚ್ಚು

ಎಂದು ನಿಶ್ಚಯವೆಂಬಂತೆ ಹೇಳಿ ಬಿಲ್ವಮಠದಲ್ಲಿ ನಡೆಯುವ ಘಟನೆಯ ಮೂಲಕ ಧರ್ಮದ ಹೆಸರಿನಲ್ಲಿ ನಡೆಯುವ ಮೋಸ, ವಂಚನೆ ಇತ್ಯಾದಿಗಳನ್ನು ವಿಡಂಬನೆ ಮಾಡುತ್ತಾ ದಾಸಿಮಯ್ಯ ಅಂತರಂಗದ ಭಕ್ತಿಯ ಸ್ವರೂಪ , ಕಾರ್ಯ ನಿಷ್ಠೆಯ ನಿರೂಪಣೆ ಹಾಗೂ ಆ ಕಾಲದ ಡಾಂಭಿಕ ಭಕ್ತರ ಬಾಹ್ಯ ಆಡಂಬರದ ಭಕ್ತಿಯನ್ನು ಖಂಡಿಸಿರುವುದನ್ನು ಈ ಕಥನ ಕವನದಲ್ಲಿ ಕಾಣಬಹುದು. ಇಂದುಗೂ ದಾಸಿಮಯ್ಯ ವಚನಗಳು ಮಾತ್ತು ವಿಚಾರಧಾರೆ ಪ್ರಸ್ತುತ ವಾಗಿದೆ ಎಂಬುದಕ್ಕೆ ಎಕ್ಕುಂಡಿಯವರ ಈ ಕಥನ ಕವನ ಸಾಕ್ಷಿಯಾಗಿದೆ.

ತಮ್ಮ ತೊಂಭತ್ತನೆ ಹುಟ್ಟುಹಬ್ಬದ ಆಚರಣೆಯ ಸಂದರ್ಭದಲ್ಲಿ ತಮ್ಮನ್ನು ಭೇಟಿ ಮಾಡಿದ ಕಿರಿಯ ಸಾಹಿತ್ಯ ಪ್ರೇಮಿಗಳೊಂದಿಗೆ ಮಾತನಾಡುತ್ತಾ- [1] "ಜನ ಸಾಮಾನ್ಯರ ಜೀವನ ವಿಧಾನ ಸುಧಾರಿಸದ ಆರ್ಥಿಕ ಸಂಕಷ್ಟದಿಂದ ಪಾರು ಮಾಡದ ಯಾವುದೇ ಸಂಶೋಧನೆ ಗ್ರಂಥ ಸಂಪಾದನೆ ಪ್ರಯೋಜನಕ್ಕೆ ಬರುವುದಿಲ್ಲ. ನಮ್ಮ ತಿಳುವಳಿಕೆ ಜನೋಪಯೋಗಿಯ ಕಡೆಗೆ ಮುಖ ಮಾಡಬೇಕಾದ ಅಗತ್ಯ ಇಂದು ಹೆಚ್ಚಾಗಿದೆ. ಸಂಶೋಧನೆ ದ್ವೇಷಪರವಾಗಿದ್ದರೆ ಅದು ಆತ್ಮ ವಿನಾಶದ, ರಾಷ್ಟ್ರ ಪತನದ ಹಾದಿ ಹಿಡಿದರೆ ಸಂಶೋಧನೆ ಎಂಬುದು ಸಂಪಾದನೆಯ, ಸುಲಿಗೆಯ, ಸಾಯುವ ಅವಿವೇಕದ ಸಾಹಸ ಎನಿಸುತ್ತದೆ. ಸಂಶೋಧನೆಯನ್ನು ಮತೀಯ ದೃಷ್ಟಿಯಿಂದ ನೋಡುವ ಅಪಾಯ ತಪ್ಪಿ ಸಮನ್ವಯತೆ, ಔದಾರ್ಯ ಬರಬೇಕಿದೆ. ಸಂಶೋಧಕರು ಜಾತಿ ವರ್ತುಲದಿಂದ ಕಳಚಿ ಮಾನವೀಯ ಆವರಣ ಸೃಷ್ಟಿಸಿ ಉತ್ತಮ ಬದುಕಿಗೆ ಪ್ರೇರಣೆ ನೀಡಿ ನಿಜವಾದ ಸಾಹಿತಿ ಎನಿಸಿಕೊಳ್ಳಬೇಕು" [1].

[2] "ಜಾತ್ಯಾತೀತ ಸಮಾಜ ಕಟ್ಟುವ ಸಂಕಲ್ಪ ತೊಟ್ಟ ವಚನಕಾರರನ್ನು, ಅವರ ಮಾತನ್ನು ಒಂದು ಮತದ, ಜಾತಿಯ ಮಾತಾಗಿ ಸೀಮಿತಗೊಳಿಸುತ್ತಿರುವುದು ವಿಪರ್ಯಾಸ" [2] - ಎಂದಿರುವ ಡಾ॥ ಎಲ್. ಬಸವರಾಜುರವರು ಸಂಶೋಧನೆ ಮತ್ತು ಸಂಶೋಧಕನ ಗುರಿ ಮತ್ತು ಜವಾಬ್ದಾರಿಯ ಎಚ್ಚರಿಕೆ ನೀಡಿದ್ದಾರೆ.

ಶರಣರು ಬರಿ ವೈದ್ಧಿಕ ಧರ್ಮವನ್ನಷ್ಟೆ ಅಲ್ಲದೆ ಶೈವ, ವೀರ ಶೈವ, ಪುರೋಹಿತ ಶಾಹಿ ಧರ್ಮವನ್ನು ಧಿಕ್ಕರಿಸಿ ದ್ರವ್ಯಲಿಂಗಿಗಳನ್ನು ನಿರಾಕರಿಸಿ ಕಾಯಕದಲ್ಲಿ ಕೈಲಾಸವನ್ನು ಕಂಡರು : ದುಡಿಮೆಯಲ್ಲಿ ದೇವರನ್ನು ಹುಡುಕಿದರು. ಆದ್ದರಿಂದಲೇ ಶರಣರೆಲ್ಲರು ಬಹುತೇಕ ಕೆಳವರ್ಗದಿಂದ ಬಂದವರಾಗಿದ್ದರು . ಆದ್ದರಿಂದ ಆದ್ಯವಚನಕಾರನಾದ ದಾಸಿಮಯ್ಯನ ವಚನಗಳನ್ನು ಷಟ್‌ಸ್ಥಲಾನುಸಾರಿಯಾಗಿ ವಿಂಗಡಿಸಲಾಗದಿದ್ದರು ಆತನ ವಚನಗಳಲ್ಲೇ ಈ ಅಂಶ ನೊರೆವಾಲೊಳೊಗೆ ಇರುವ ತುಪ್ಪದಂತೆ ಸೇರಿಹೋಗಿದೆ.

**ಅಡಿ ಟಿಪ್ಪಣಿ**

1. ಸಾಪ್ತಾಹಿಕ ಪ್ರಭ ( ಕನ್ನಡ ಪ್ರಭ) ಪುಟ- 4 , ದಿ - 12-10 -2008 ರ ದಿನ ಪತ್ರಿಕೆ.
2. ಸಾಪ್ತಾಹಿಕ ಪುರವಣಿ ( ಪ್ರಜಾವಾಣಿ ) ಪುಟ - 4, ದಿ - 12-10-2008 ರ ದಿನಪತ್ರಿಕೆ.

# ಪರಾಮರ್ಶನ ಗ್ರಂಥಗಳು


ದೇವರ ದಾಸಿಮಯ್ಯ
ಕೆ. ಅನಂತರಾಮು ( ಲೇಖಕರು )
ಪ್ರಸಾರಾಂಗ, ಮೈಸೂರು ವಿಶ್ವ ವಿದ್ಯಾನಿಲಯ
1972.
ಮುದ್ರಕರು
ಫರ್‌ಫೆಕ್ಟ್ ಇಂಡಸ್ಟ್ರೀಸ್,
ವಿ. ವಿ. ಮೊಹಲ್ಲಾ,
ಮೈಸೂರು - 2.

ದೇವರ ದಾಸಿಮಯ್ಯನ ವಚನಗಳು
ಸಂಪಾದಕ
ಡಾ. ಎಲ್. ಬಸವರಾಜು ಎಂ. ಎ. ಡಿ. ಲಿಟ್,
ಪ್ರಾಧ್ಯಾಪಕ, ಕನ್ನಡ ಅಧ್ಯಯನ ರಸ್ತೆ, ಮೈಸೂರು.
1970.
ಮುದ್ರಕರು :
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್,
ಜಯನಗರ, ಮೈಸೂರು - 9

ವಚನ ವ್ಯಾಸಂಗ
ಪಿ. ವಿ. ನಾರಾಯಣ
ಭಾಗ್ಯಲಕ್ಷ್ಮಿ ಪ್ರಕಾಶನ
524, ಶ್ರೀ ನಗರ ಮುಖ್ಯ ರಸ್ತೆ, ಬನಶಂಕರಿ
ಮೊದಲನೆ ಘಟ್ಟ, ಬೆಂಗಳೂರು
1980
ಮುದ್ರಕರು
ನೇತ್ರಾ ಪ್ರಿಂಟರ್ಸ್
6 ನೇ ರಸ್ತೆ,
ಚಾಮರಾಜ ಪೇಟೆ,
ಬೆಂ - 18

ವಚನ ಧರ್ಮಸಾರ
ಸಂಪಾದಕ : ಎಂ. ಆರ್. ಶ್ರೀನಿವಾಸ ಮೂರ್ತಿ,
ಮೈಸೂರು ವಿಶ್ವ ವಿದ್ಯಾನಿಲಯ,
ಮೈಸೂರು.
1944.
ಮುದ್ರಕರು
ಮೈಸೂರು ವಿಶ್ವ ವಿದ್ಯಾನಿಲಯದ
ಮೈಸೂರು - 12.

ಕನ್ನಡ ಸಾಹಿತ್ಯ ಚರಿತ್ರೆ
( ಕಿರಿಯ ಆವೃತ್ತಿ )
ಡಾ . ರಂ . ಶ್ರೀ ಮುಗಳಿ
ಸಮಾಜ ಪುಸ್ತಕಾಲಯ ,
ಧಾರವಾಡ .
1996 .

ಸಂಕೀರ್ಣ ವಚನ ಸಂಪುಟ : ಎರಡು
ಸಂಪಾದಕ : ಡಾ . ಎಸ್ . ವಿದ್ಯಾ ಶಂಕರ ,
ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ ,

ಬಸವಣ್ಣನವರ ಷಟ್‌ಸ್ಥಲದ ವಚನಗಳು,
ಸಂಪಾದಕರು
ಪ್ರೊ॥ ಬಸವನಾಳ ಶವಲಿಂಗಪ್ಪನವರು, ಎಂ . ಎ .
ಸಾಹಿತ್ಯ ಸಮಿತಿ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ
ಧಾರವಾಡ.
1990.

ದಾಸ ಸಾಹಿತ್ಯ
ಸಂಪಾದಕರು
ದಿ : ವಿ. ಸೀತಾರಾಮಯ್ಯ
ಪ್ರೊ॥ ಜಿ. ವೆಂಕಟಸುಬ್ಬಯ್ಯ ,
ಐ. ಬಿ. ಹೆಚ್. ಪ್ರಕಾಶನ
ಗಾಂಧಿನಗರ ಬೆಂಗಳೂರು,
1987.

ದಾಸ ಸಾಹಿತ್ಯ ವಾಹಿನಿ
ಪ್ರೊ॥ ಅರಳು ಮಲ್ಲಿಗೆ ಪಾರ್ಥಸಾರಥಿ
ಲಕ್ಷ್ಮಿ ಮುದ್ರಣಾಲಯ,
ಚಾಮರಾಜ ಪೇಟೆ, ಬೆಂಗಳೂರು
1997.

ಪ್ರಕಾಶಕರು
ಸಮಾಜ ಪುಸ್ತಕಾಲಯ
ಧಾರವಾಡ - 1 .

ಮುದ್ರಕರು ,
ಸ್ನೇಹಾ ಪ್ರಿಂಟರ್ಸ್,
ನಂ .114, 4 ನೇ ಅಡ್ಡ ರಸ್ತೆ,
ಬಿ . ಸಿ . ಸಿ . ಬಡಾವಣೆ ,

ದಾಸ ಸಾಹಿತ್ಯ ದರ್ಶನ
ಸಂಪಾದಕರು : ಎಚ್ಚೆಸ್ಕೆ,
ಮಂಗಳ ಭಾರತಿ ಪ್ರಕಾಶನ, ಮೈಸೂರು,
1984.

ಶ್ರೀ ಕುವೆಂಪು
ಪ್ರಧಾನ ಸಂಪಾದಕರು : ಡಾ॥ ಜಿ. ಎಸ್. ಶಿವರುದ್ರಪ್ಪ
ಪ್ರಸಾರಾಂಗ ಬೆಂಗಳೂರು ವಿಶ್ವ ವಿದ್ಯಾಲಯ ಬೆಂಗಳೂರು
1980.

ಅನುಬಂಧ

## ದಾಸಿಮಯ್ಯನ ಕೆಲವು ವಚನಗಳು

1. ಕರಿಯನಿತ್ತಡೆ ಒಲ್ಲೆ , ಸಿರಿಯನಿತ್ತಡೆ ಒಲ್ಲೆ,
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ !
ನಿಮ್ಮ ಶರಣರ ಸೂಳ್ನುಡಿಯನೊಂದರೆಗಳಿಗೆ ಯಿತ್ತಡೆ
ನಿಮ್ಮನಿತ್ತೆ ಕಾಣಾ ರಾಮನಾಥ.

2. ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದೆ ಮಾಣ್ಬುದೆ
ಕಡೆಗೀಲು ಬಂಡಿಗಾಧಾರ
ಕಡುದರ್ಪವೇರಿದ ಒಡಲೆಂಬ ಬಂಡಿಗೆ
ಮೃಡಭಕ್ತರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ.

3. ಕತ್ತೆ ಬಲ್ಲುದೇ ಕತ್ತುರಿಯ ವಾಸನೆಯ ?
ತೊತ್ತು ಬಲ್ಲಳೇ ಗುರುಹಿರಿಯರುತ್ತಮರೆಂಬುದ?
ಭಕ್ತಿಯನರಿಯದ ವ್ಯರ್ಥ ಜೀವಿಗಳು ನಿಮ್ಮವರ
ನೆತ್ತ ಬಲ್ಲರೈ ರಾಮನಾಥ !

4. ಹೆಣ್ಣು ಕಂಡು ಹೆಚ್ಚಿ ಹೆಕ್ಕಳ ಬಡುವಂತೆ
ಕಣ್ಣಟ್ಟು ನೋಡಿರೋ ಶಿವಲಿಂಗದೇವನ !
ಕರಣದಿಚ್ಚೆಗೆ ಹರಿದು ನರಕದಲ್ಲಿ ನೆರೆದು
ಬರುದೊರೆವೋಗದೆ ಮರೆಯದೆ ಪೂಜಿಸಿ ನಮ್ಮ ರಾಮನಾಥನ

5. ಕುಲಸ್ವಾಮಿ ನಿಮ್ಮವ  ಒಲಿವುದ ಕಂಡಡೆ
ತಲೆವಾಗುವೆ ಕಾತ ಕಳವೆಯಂತೆ,
ಕುಲಜ ನಾನೆಂದು ತಲೆವಾಗದಿರ್ದಡೆ
ತಲೆ ಶೂಲದ ತಲೆಯಯ್ಯ ರಾಮನಾಥ.

6. ಇರುಹೆಯ ತೆರ ನೇನು !?
ನೆರೆ ಫಲವಿಲ್ಲದೆ ಮಾಡಿದವನ ಭಕ್ತಿ
ಆ ಇರುಹೆಯಿಂದ ಕರಕಷ್ಟ ಕಾಣಾ ರಾಮನಾಥ.

7. ಮಾಡಿದಲ್ಲದೆ ಮನೆಯೊಳಗಾಗದು ಬಯಲು
ಕಣ್ಣು ಕಂಡಲ್ಲದೆ ರೂಪೆಂದು ನಿಶ್ಚೈಸದು ಮನ
ಪಥವೆಂದಲ್ಲದೆ ಪರವಾಗದು
ಈ ಪರಿಯ ನರನೆತ್ತ ಬಲ್ಲರೈ ರಾಮನಾಥ.

8. ಹೆಂಬೇಡಿಗೆ ಹಿಡಿಯಬಹುದೇ ಹೇಳಿಗೆಯೊಳಗಿಣ ಹಾವ
ತೊರೆಯಬಹುದೇ  ಹೊನ್ನು - ಮಣ್ಣು - ಹೆಣ್ಣು
ನಿನ್ನನರಿಯದ ನರಗುರಿಗಳಿಗೆ ರಾಮನಾಥ.

9. ಮಂಡೆಯಂ ಬೋಳಿಸಿಕೊಂಡು ನುಡಿದು ಗೋಷ್ಠಿಯ ಕಟ್ಟಿದಡೇನು
ಕಂಡ ಕಂಡರಿಗೆ ಕೈಯೊಡ್ಡಿ ಬೇಡುವ
ಭಂಡರನೊಲ್ಲ ರಾಮನಾಥ.

